CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಮಾರ್ಚ್ ೧೦, ೨೦೦೫ (ಫಾಲ್ಗುಣ ೧೯, ಶಕ ವರ್ಷ ೧೯೨೬) | ಸಂಚಿಕೆ ೧೦ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಎ. ಪಿ. ಕೆರಪ್ಪನವರ್, ಕೆಎಎಸ್ ಹಾಗೂ ಇತರರ ವಿರುದ್ಧ ಇಲಾಖಾ ವಿಚಾರಣೆ ಶ್ರೀ ಎ. ಜೆ. ದುಮಾಳೆ, ಕೆಎಎಸ್ ಅಧಿಕಾರಿ ಇವರನ್ನು ವಿಚಾರಣಾ ವ್ಯಾಪ್ತಿಯಿಂದ ಕೈಬಿಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 66 ಎಸ್‌ಇಎನ್ 02 ದಿನಾಂಕ: 9.8.2004 ಮತ್ತು 3.9.2004.

**ಪ್ರಸ್ತಾವನೆ:**

ಬೆಳಗಾವಿ ಜಿಲ್ಲೆಯ ಹಿಡ್ಕಲ್ ಡ್ಯಾಮ್ ಯೋಜನೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನಿನ ಪೈಕಿ ಹುಕ್ಕೇರಿ ತಾಲ್ಲೂಕಿನ ಜಿನರಾಳ ಗ್ರಾಮದ ಸರ್ವೆ ನಂ. 58/1, 58/2 ಮತ್ತು 59/2 ರ ಸಂಬಂಧ ಬೆಳಗಾವಿ ಜಿಲ್ಲಾ ನ್ಯಾಯಾಲಯವು ನೀಡಿರುವ ತೀರ್ಪಿನ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಲು ವಿಳಂಬ ಮಾಡಿರುವ ಅಧಿಕಾರಿಗಳ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳಲು ಎಂ.ಎಸ್.ಎ. ಸಂಖ್ಯೆ: 26/2002 ರಲ್ಲಿ ಉಚ್ಚ ನ್ಯಾಯಾಲಯವು ನೀಡಿದ ತೀರ್ಪಿನಲ್ಲಿ ಆದೇಶಿಸಿರುತ್ತದೆ. ಸದರಿ ಆದೇಶದಲ್ಲಿ 20.3.1992 ರಿಂದ 7.7.2000 ದವರೆಗೆ ಹಿಡ್ಕಲ್ ಯೋಜನೆಯಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕಾರ್ಯನಿರ್ವಹಿಸಿದ್ದ ಈ ಕೆಳಕಂಡ ಅಧಿಕಾರಿಗಳನ್ನು ಉಲ್ಲೇಖಿಸಿರುತ್ತದೆ.

1. ಶ್ರೀ ಎ. ಪಿ. ಕೆರಪ್ಪನವರ್
2. ಶ್ರೀ ಬಿ. ಎಂ. ಅಲಗಟ್ಟಿ
3. ಶ್ರೀ ಎಂ. ವಿ. ಗಂಗೊಂಡಶೆಟ್ಟಿ
4. ಶ್ರೀ ಎಂ. ಬಿ. ವಾಲೀಕರ್
5. ಶ್ರೀ ಎನ್. ಹೆಚ್. ಸುಳೇಬಾವಿ
6. ಶ್ರೀ ಎ. ಜೆ. ದುಮಾಳೆ

ಅದರಂತೆ ಮೇಲ್ಕಂಡ ಅಧಿಕಾರಿಗಳ ವಿರುದ್ಧ ಮತ್ತು ಈ ಲೋಪಕ್ಕೆ ಜವಾಬ್ದಾರರಾದ ಇತರೆ ಸಿಬ್ಬಂದಿ ಶ್ರೀ ಎ. ಎಸ್. ಹೊಸಮನಿ ಮತ್ತು ಶ್ರೀ ಜೆ. ಬಿ. ಜಹಜ, ಪ್ರ.ದ.ಸ ಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ನಿವೃತ್ತ ನ್ಯಾಯಾಧೀಶರಾದ ಶ್ರೀ ಎಂ. ಎನ್. ಗದಗ್ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿರುತ್ತದೆ.

ಈ ಸಂಬಂಧ 6ನೇ ಆರೋಪಿತರಾದ ಶ್ರೀ ಎ. ಜೆ. ದುಮಾಳೆ ಇವರು ಸರ್ಕಾರಕ್ಕೆ ಅವರ ಮನವಿ ದಿನಾಂಕ: 20.1.2005ನ್ನು ಸಲ್ಲಿಸುತ್ತಾ ಉಚ್ಚ ನ್ಯಾಯಾಲಯದ ಆದೇಶದ ಪ್ರಕಾರ ದಿನಾಂಕ: 20.3.92 ರಿಂದ 7.7.2000 ದವರೆಗಿನ ಅವಧಿಯಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸಿದ್ದ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ತೆಗೆದುಕೊಳ್ಳಲು ಆದೇಶಿಸಿರುತ್ತದೆಂದು ಆದರೆ ಇವರು ದಿನಾಂಕ: 7.7.2000ರ ಅಪರಾಹ್ನದೆಂದು ಹಿಡ್ಕಲ್ ಡ್ಯಾಮ್ ಯೋಜನೆಯ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕಾರ್ಯಭಾರವನ್ನು ವಹಿಸಿಕೊಂಡಿದ್ದರಿಂದ ವಿಚಾರಣೆಯಲ್ಲಿ ಅವರನ್ನು ಸೇರಿಸಿರುವುದು ಸಮಂಜಸವಲ್ಲವೆಂದು ಅವರನ್ನು ಈ ಪ್ರಕರಣದಿಂದ ಕೈಬಿಡುವ ಬಗ್ಗೆ ಮನವಿ ಮಾಡಿರುತ್ತಾರೆ.

ಶ್ರೀ ಎ. ಜೆ. ದುಮಾಳೆರವರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಯಿತು. ಬೆಳಗಾವಿ ಜಿಲ್ಲಾ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು 1992 ರಿಂದ 2000 ತನಕ ವಿಳಂಬವಾಗಲು ಹಲವಾರು ಅಧಿಕಾರಿಗಳು ಕಾರಣರಾಗಿರುತ್ತಾರೆ. ಈ ಸಂಬಂಧ ಅಡ್ವೋಕೇಟ್ ಜನರಲ್‌ರವರು ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿರುವ ಅಫಿಡವಿಟ್‌ನಲ್ಲಿ ಶ್ರೀ ಎ. ಜೆ. ದುಮಾಳೆರವರು ಮೇಲ್ಮನವಿಯನ್ನು ಸಲ್ಲಿಸಲು ಪ್ರಕ್ರಿಯೆಯನ್ನು ಪ್ರಾರಂಭಿಸಿದ ಮೊಟ್ಟಮೊದಲ ಅಧಿಕಾರಿ ಎಂದು ಗುರುತಿಸಿರುತ್ತಾರೆ. ಶ್ರೀ ದುಮಾಳೆರವರು ಕೆಳಗಿನ ನ್ಯಾಯಾಲಯದ ತೀರ್ಪಿನ ದೃಢೀಕೃತ ಪ್ರತಿಯನ್ನು

ದಿನಾಂಕ: 24.8.2001 ರಂದು ಪಡೆಯಲು ಸಾಧ್ಯವಾಗಿದ್ದು ಅದನ್ನು ದಿನಾಂಕ: 27.8.2001 ರಂದು ಅಡ್ವೋಕೇಟ್ ಜನರಲ್‌ರವರ ಕಛೇರಿಗೆ ತಲುಪಿಸಿರುತ್ತಾರೆಂದು ಸಹ ಸದರಿ ಅಫಿಡವಿಟ್‌ನಲ್ಲಿ ಉಲ್ಲೇಖವಿರುತ್ತದೆ. ಈ ವಿವರಗಳನ್ನು ಪರಿಶೀಲಿಸಲಾಗಿ ಶ್ರೀ ಎ. ಜೆ. ದುಮಾಳೆರವರು ದಿನಾಂಕ: 7.7.2000 ರಂದು ಹಿಡ್ಕಲ್ ಡ್ಯಾಮ್ ಯೋಜನೆಯ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕಾರ್ಯಭಾರವನ್ನು ವಹಿಸಿಕೊಂಡ ನಂತರವೇ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಲು ಪ್ರಕ್ರಿಯೆಯನ್ನು ಪ್ರಾರಂಭಿಸಿರುವುದು ಕಂಡು ಬರುತ್ತದೆ. ಆದ್ದರಿಂದ 1992 ರಿಂದ 2000 ದವರೆಗೆ ಯಾವುದೇ ಕ್ರಮ ತೆಗೆದುಕೊಳ್ಳದೇ ವಿಳಂಬ ಮಾಡಿದ ಅಧಿಕಾರಿಗಳ ವಿರುದ್ಧ ಶಿಸ್ತಿನ ಕ್ರಮದ ಜೊತೆ ದಿನಾಂಕ: 7.7.2000 ರಂದು ಸದರಿ ಹುದ್ದೆಗೆ ನೇಮಕಗೊಂಡ ಶ್ರೀ ಎ. ಜೆ. ದುಮಾಳೆರವರನ್ನು ಸಹ ಸೇರಿಸುವುದು ಸಮಂಜಸವಾಗಲಾರದು. ಉಚ್ಚ ನ್ಯಾಯಾಲಯದ ಆದೇಶವು 7.7.2000 ದವರೆಗೆ ಕರ್ತವ್ಯ ನಿರ್ವಹಿಸಿದ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ತೆಗೆದುಕೊಳ್ಳಬೇಕಾಗಿದ್ದು ಅದೇ ದಿನ ಅಪರಾಹ್ನ ಕಾರ್ಯಭಾರವನ್ನು ವಹಿಸಿಕೊಂಡಿರುವ ಅಧಿಕಾರಿಯನ್ನು ಸೇರಿಸುವ ಅಗತ್ಯವಿಲ್ಲವೆಂದು ಸ್ಪಷ್ಟಪಡುತ್ತದೆ. ಈ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 66 ಎಸ್‌ಇಎನ್ 2002 ಬೆಂಗಳೂರು ದಿನಾಂಕ: 19ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಪರಿಸ್ಥಿತಿಗಳಲ್ಲಿ ಸರ್ಕಾರದ ಆದೇಶ ದಿನಾಂಕ: 9.8.2004 ರಲ್ಲಿ ಹೆಸರಿಸಲಾಗಿರುವ ಆರೋಪಿತ ಅಧಿಕಾರಿಗಳ ಪೈಕಿ ಶ್ರೀ ಎ. ಜೆ. ದುಮಾಳೆ, ಕೆಎಎಸ್ ಇವರು ಈ ಪ್ರಕರಣದಲ್ಲಿ ಭಾಗಿಯಾಗದೇ ಇರುವುದರಿಂದ ಅವರನ್ನು ಮಾತ್ರ ಶಿಸ್ತು ಕ್ರಮದ ವ್ಯಾಪ್ತಿಯಿಂದ ಕೈಬಿಡಲು ಸರ್ಕಾರವು ಆದೇಶಿಸುತ್ತದೆ. ಅದರಂತೆ ಅವರ ಮೇಲೆ ಹೊರಿಸಲಾದ ದೋಷಾರೋಪಣೆಗಳಿಂದ ಅವರನ್ನು ದೋಷಮುಕ್ತರನ್ನಾಗಿ ಪರಿಗಣಿಸಿದೆ. ಈ ವಿಚಾರಣೆಯನ್ನು ಪ್ರಾರಂಭಿಸದೇ ಇದ್ದಲ್ಲಿ ಶ್ರೀ ದುಮಾಳೆರವರು ಯಾವ ಸೌಲಭ್ಯಗಳಿಗೆ ಅರ್ಹರಿದ್ದರೋ ಅಂತಹ ಎಲ್ಲಾ ಸೌಲಭ್ಯಗಳಿಗೆ ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್. ಆರ್. ನಾಗೇಂದ್ರ**
ಪಿ.ಆರ್.274 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

**ವಿಷಯ :** ಮಾನ್ಯ ಪ್ರವಾಸೋದ್ಯಮ ಸಚಿವರ ಕಛೇರಿಯಲ್ಲಿರುವ ಪತ್ರಾಂಕಿತ ಆಪ್ತ ಸಹಾಯಕ ಹುದ್ದೆಯನ್ನು ಗ್ರೂಪ್ 'ಎ' ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :** 1. ಮಾನ್ಯ ಪ್ರವಾಸೋದ್ಯಮ ಸಚಿವರ ಟಿಪ್ಪಣಿ ಸಂಖ್ಯೆ: ಪ್ರಸಕಾ: 1: 04, ದಿನಾಂಕ: 15.12.2004.

**ಪ್ರಸ್ತಾವನೆ:**

ಮಾನ್ಯ ಪ್ರವಾಸೋದ್ಯಮ ಸಚಿವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾಗಿರುವ ದಿನಾಂಕ: 15.12.2004ರ ಟಿಪ್ಪಣಿಯಲ್ಲಿ ಶ್ರೀ ಸಿ. ಹಲಗಾನಾಯಕ್, ಆಪ್ತ ಕಾರ್ಯದರ್ಶಿ ಗ್ರೇಡ್-2, ಲೋಕೋಪಯೋಗಿ ಇಲಾಖೆ, ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ ಇವರನ್ನು ತಮ್ಮ ಆಪ್ತ ಶಾಖೆಯಲ್ಲಿ ವಿಶೇಷಾಧಿಕಾರಿಯನ್ನಾಗಿ ದಿನಾಂಕ: 15.12.2004 ರಿಂದ ಜಾರಿಗೆ ಬರುವಂತೆ ನೇಮಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಆದುದರಿಂದ, ಪ್ರಸ್ತುತ ಪ್ರವಾಸೋದ್ಯಮ ಸಚಿವರ ಕಛೇರಿಯಲ್ಲಿರುವ ವೇತನ ಶ್ರೇಣಿ ರೂ. 6000-11200ರ ಪತ್ರಾಂಕಿತ ಆಪ್ತ ಸಹಾಯಕ ಹುದ್ದೆಯನ್ನು ವೇತನ ಶ್ರೇಣಿ ರೂ. 7400-13120ರ ಗ್ರೂಪ್ 'ಎ' ಹುದ್ದೆಗೆ ಉನ್ನತೀಕರಿಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 393 ಸಆಸೇ 2004 ಬೆಂಗಳೂರು ದಿನಾಂಕ: 22ನೇ ಫೆಬ್ರವರಿ 2005**

ಮಾನ್ಯ ಪ್ರವಾಸೋದ್ಯಮ ಸಚಿವರ ಆಪ್ತ ಶಾಖೆಯಲ್ಲಿ ಲಭ್ಯವಿರುವ ರೂ. 6000-11200ರ ಪತ್ರಾಂಕಿತ ಆಪ್ತ ಸಹಾಯಕ ಹುದ್ದೆಯನ್ನು ದಿನಾಂಕ: 15.12.2004 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಶ್ರೀ ಸಿ. ಹಲಗಾನಾಯಕ್, ಆಪ್ತ ಕಾರ್ಯದರ್ಶಿ ಗ್ರೇಡ್-2 ಇವರ ಸೇವೆಯು ಮಾನ್ಯ ಸಚಿವರ ಆಪ್ತ ಶಾಖೆಯಲ್ಲಿ ಅವಶ್ಯವಿರುವವರೆಗೆ ಅಥವಾ ಒಂದು ವರ್ಷದವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ರೂ. 7400-13120 ರ ಗ್ರೂಪ್ 'ಎ' ಹುದ್ದೆಗೆ ಉನ್ನತೀಕರಿಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 95 ವೆಚ್ಚ-5/2005, ದಿನಾಂಕ: 11.2.2005ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್. ಆರ್. ನಾಗೇಂದ್ರ**
ಪಿ.ಆರ್.272 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ :** ಶ್ರೀ ಡಿ. ಎಸ್. ಶಿವಣ್ಣ, ನಿವೃತ್ತ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ವಿರುದ್ಧ ಇಲಾಖಾ ವಿಚಾರಣೆ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. ನೋಟೀಸ್ ಸಂಖ್ಯೆ: ಸಿಆಸುಇ 114 ಎಸ್‌ಇಎನ್ 2004 ದಿನಾಂಕ: 17.9.2004.
2. ಶ್ರೀ ಡಿ. ಎಸ್. ಶಿವಣ್ಣ, ನಿವೃತ್ತ ಉಪ ಕಾರ್ಯದರ್ಶಿ ಇವರ ಉತ್ತರ ದಿನಾಂಕ: 27.10.2004.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರದ ಸಚಿವಾಲಯದ ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಪ್ರವಾಸೋದ್ಯಮ ಇಲಾಖೆಯಲ್ಲಿನ ಪ್ರವಾಸಿ ಪ್ರವರ್ತಕರಾಗಿ ಕಾರ್ಯನಿರ್ವಹಿಸುತ್ತಿದ್ದವರನ್ನು ಸರ್ಕಾರಿ ಸೇವೆಯಲ್ಲಿ ವಿಲೀನಗೊಳಿಸುವ ಪ್ರಸ್ತಾವನೆಗೆ ಆರ್ಥಿಕ ಇಲಾಖೆ, ಸಿಆಸುಇ (ಸೇವಾ ನಿಯಮ) ಹಾಗೂ ಕಾನೂನು ಇಲಾಖೆಯೊಡನೆ ಸಮಾಲೋಚನೆಯಲ್ಲಿರುವಾಗಲೇ ಮೇಲಾಧಿಕಾರಿಗಳ ಯಾವುದೇ ಸೂಚನೆಯಿಲ್ಲದೆ ಹಾಗೂ ಅವರಿಂದ ಅನುಮೋದನೆ ಪಡೆಯದೆ 42 ಪ್ರವಾಸೋದ್ಯಮ ಪ್ರವರ್ತಕರ ಸೇವೆಯನ್ನು ಖಾಯಂಗೊಳಿಸಿ ಆದೇಶ ಹೊರಡಿಸಿರುವ ಆರೋಪಕ್ಕಾಗಿ ಶ್ರೀ ಡಿ. ಎಸ್. ಶಿವಣ್ಣ, ನಿವೃತ್ತ ಉಪ ಕಾರ್ಯದರ್ಶಿ ಅವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 17.9.2004ರ ನೋಟೀಸ್ ಜಾರಿ ಮಾಡುವುದರ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಈ ನೋಟೀಸಿಗೆ ಆರೋಪಿತರು ಮೇಲೆ (2) ರಲ್ಲಿ ಓದಲಾದ ದಿನಾಂಕ: 27.10.2004 ರಂದು ಉತ್ತರ ಸಲ್ಲಿಸಿ, ಅವರು ಅವರಿಗೆ ನೀಡಿರುವ

ನೋಟೀಸಿಗೆ ಸಂಬಂಧಿಸದೇ ಇರುವ ಉತ್ತರವನ್ನು ನೀಡಿದ್ದು ಹಾಗೂ ಸಮರ್ಪಕ ಕಾರಣಗಳನ್ನು ನೀಡದೆ ಇರುವುದರಿಂದ ಅವರ ಮೇಲೆ ಮಾಡಲಾದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರೆಸಲು ತೀರ್ಮಾನಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 114 ಎಸ್‌ಇಎನ್ 2004 ಬೆಂಗಳೂರು ದಿನಾಂಕ: 11ನೇ ಫೆಬ್ರವರಿ 2005**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಡಿ. ಎಸ್. ಶಿವಣ್ಣ, ನಿವೃತ್ತ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸುವ ಸಲುವಾಗಿ ಶ್ರೀ ಎಸ್. ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ಕಾರ್ಯಕ್ಕಾಗಿ ಅವರು ಸರ್ಕಾರಿ ಆದೇಶ ಕ್ರಮಾಂಕ ಸಿಆಸುಇ 3 ಸೇಇವಿ 96 ದಿನಾಂಕ: 24.4.98 ಹಾಗೂ ಸಿಆಸುಇ 45 ಸೇಇವಿ 2001 ದಿನಾಂಕ: 4.3.2002 ರಲ್ಲಿ ನಿಗದಿಪಡಿಸಿರುವಂತೆ ಗೌರವಧನ ಹಾಗೂ ಪ್ರಯಾಣ ಭತ್ಯೆ ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರದ ಅಧೀನ ಕಾರ್ಯದರ್ಶಿ, ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನಸೇವಾ ಇಲಾಖೆ, (ವಾರ್ತಾ) ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ವಿಚಾರಣೆಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನಸೇವಾ ಇಲಾಖೆ ಅವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್. ಆರ್. ನಾಗೇಂದ್ರ**

ಪಿ.ಆರ್.271

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

**ಕರ್ನಾಟಕ ಸರ್ಕಾರದ ಸಚಿವಾಲಯ**

**ಸುತ್ತೋಲೆ ಸಂಖ್ಯೆ: ಸಿಆಸುಇ 1 ಸೇಇವಿ 2005 ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2005**

**ವಿಷಯ :** ಇಲಾಖಾ ವಿಚಾರಣೆಯ ಪ್ರಸ್ತಾವನೆ ಸಲ್ಲಿಸುವಲ್ಲಿ ಅಪೂರ್ಣ ಮಾಹಿತಿ/ ದಾಖಲೆಗಳನ್ನು ಸಲ್ಲಿಸುತ್ತಿರುವ ಬಗ್ಗೆ.

**ಉಲ್ಲೇಖ :** 1. ಸುತ್ತೋಲೆ ಸಂಖ್ಯೆ: ಸಿಆಸುಇ 9 ಸೇಇವಿ 98 ದಿನಾಂಕ: 3.8.98.

2. ಸುತ್ತೋಲೆ ಸಂಖ್ಯೆ: ಸಿಆಸುಇ 7 ಸೇಇವಿ 2003 ದಿನಾಂಕ: 12.5.2003.

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ವಿವಿಧ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ/ ಇಲಾಖಾ ವಿಚಾರಣೆ ಜರುಗಿಸುವ ಸಲುವಾಗಿ ಸಂಬಂಧಪಟ್ಟ ಆಡಳಿತ ಇಲಾಖೆಗಳಿಂದ ಪ್ರಸ್ತಾವನೆ ಸಲ್ಲಿಸುವ ಪೂರ್ವದಲ್ಲಿ ಅನುಸರಿಸಬೇಕಾದ ಕ್ರಮಗಳ ಬಗ್ಗೆ ಉಲ್ಲೇಖಿತ ದಿನಾಂಕ: 3.8.98 ಮತ್ತು 12.5.2003ರ ಸುತ್ತೋಲೆಗಳಲ್ಲಿ ಕೆಲವೊಂದು ಮಾರ್ಗಸೂಚಿಗಳನ್ನು ನೀಡಲಾಗಿತ್ತು. ಅದರನ್ವಯ ಪ್ರಸ್ತಾವನೆಯನ್ನು ಆಡಳಿತ ಇಲಾಖೆಯಲ್ಲಿ ಕೂಲಂಕುಷವಾಗಿ ಪರಿಶೀಲಿಸಿ ಶಿಸ್ತಿನ ಕ್ರಮವನ್ನು ಪ್ರಾರಂಭಿಸಬೇಕೆ, ಬೇಡವೇ ಎಂಬುದರ ಬಗ್ಗೆ ಇಲಾಖಾ ಸಚಿವರ ಅನುಮೋದನೆ ಪಡೆದು ವಿಚಾರಣೆ ನಡೆಸುವ ಬಗ್ಗೆ ಒಂದು ನಿರ್ದಿಷ್ಟ ತೀರ್ಮಾನಕ್ಕೆ ಬಂದು ಸ್ಪಷ್ಟ ಹಾಗೂ ನಿರ್ದಿಷ್ಟ ಆರೋಪಗಳುಳ್ಳ ಪರಿಪೂರ್ಣವಾದ ದೋಷಾರೋಪಣೆಗಳನ್ನು ಅನುಬಂಧ 1 ರಿಂದ 4 ಸಿದ್ಧಪಡಿಸಿ, ಈ ದೋಷಾರೋಪಣೆಗಳಲ್ಲಿ ಆಪಾದಿತ ಅಧಿಕಾರಿಯ ದುರ್ನಡತೆಯಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟ, ಉಲ್ಲಂಘಿಸಿರುವ ಕಾಯ್ದೆ, ಕಾನೂನು, ನಿಯಮಗಳನ್ನು ಸ್ಪಷ್ಟವಾಗಿ ಅಳವಡಿಸಿ ಮೂಲ ದಾಖಲೆಗಳೊಂದಿಗೆ ಪರಿಪೂರ್ಣವಾದ ಪ್ರಸ್ತಾವನೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಕಳುಹಿಸಬೇಕೆಂದು ಹಾಗೂ ವಯೋ ನಿವೃತ್ತಿ ಅಂಚಿನಲ್ಲಿರುವ ಅಧಿಕಾರಿಗಳ ವಿರುದ್ಧದ ಶಿಸ್ತು ಕ್ರಮದ ಪ್ರಸ್ತಾವನೆಯನ್ನು ಸಾಕಷ್ಟು ಮುಂಚಿತವಾಗಿಯೇ ಕಳುಹಿಸಬೇಕೆಂದು ಸೂಚನೆಗಳನ್ನು ನೀಡಲಾಗಿತ್ತು.

2. ಹೀಗೆ ಹಲವಾರು ಬಾರಿ ಸ್ಪಷ್ಟ ಸೂಚನೆಗಳನ್ನು ನೀಡಿದ್ದರೂ ಸಹ ಈ ಸೂಚನೆಗಳನ್ನು ಆಡಳಿತ ಇಲಾಖೆಗಳು ಪಾಲಿಸದೆ ಕೇವಲ ಪತ್ರಗಳನ್ನು/ ದೂರುಗಳನ್ನು ಯಥಾವತ್ತಾಗಿ ಸಿಆಸು ಇಲಾಖೆಗೆ ಕಳುಹಿಸುತ್ತಿರುವುದು ಕಂಡು ಬಂದಿದೆ. ಮೇಲ್ಕಂಡ ಸುತ್ತೋಲೆಗಳಲ್ಲಿನ ಮಾರ್ಗಸೂಚಿಗಳನ್ನು ಆಡಳಿತ ಇಲಾಖೆಗಳು ಗಂಭೀರವಾಗಿ ತೆಗೆದುಕೊಳ್ಳುತ್ತಿಲ್ಲ. ಈ ರೀತಿ ಗಂಭೀರವಾಗಿ ತೆಗೆದುಕೊಳ್ಳದೆ ಹಾಗೂ ಅನಗತ್ಯವಾಗಿ ದೀರ್ಘ ಕಾಲದ ಪತ್ರ ವ್ಯವಹಾರ ನಡೆಸುವ ಹಾಗೂ ಸಕಾಲದಲ್ಲಿ ವಿಚಾರಣೆ ಹೂಡಲು ತೊಡಕಾಗುವುದರ ಜೊತೆಗೆ ಆಪಾದಿತರ ವಿರುದ್ಧದ ದೋಷಾರೋಪಣೆಗಳು ದುರ್ಬಲಗೊಳ್ಳುತ್ತಿವೆ. ಈ ಹಿನ್ನೆಲೆಯಲ್ಲಿ ಮೇಲ್ಕಂಡ ಸುತ್ತೋಲೆಗಳಲ್ಲಿ ತಿಳಿಸಿರುವ ಸೂಚನೆಗಳನ್ನು ಪುನರುಚ್ಛರಿಸುತ್ತಾ ಈ ಕೆಳಕಂಡ ಸೂಚನೆಗಳ ಬಗ್ಗೆ ಆಡಳಿತ ಇಲಾಖೆಗಳು ಗಮನ ಹರಿಸಬೇಕೆಂದು ಹಾಗೂ ಇದನ್ನು ಪಾಲಿಸದ ಅಧಿಕಾರಿಗಳು ನೇರವಾಗಿ ಜವಾಬ್ದಾರರಾಗಿರುತ್ತಾರೆಂದು ಅಂತಹವರ ವಿರುದ್ಧ ಶಿಸ್ತು ಕ್ರಮವನ್ನು ಜರುಗಿಸಲಾಗುವುದೆಂದು ಸ್ಪಷ್ಟಪಡಿಸಲಾಗಿದೆ. ಅನಗತ್ಯ ಪತ್ರ ವ್ಯವಹಾರವನ್ನು ಹಾಗೂ ಆಗಬಹುದಾದ ವಿಳಂಬವನ್ನು ತಡೆಗಟ್ಟುವ ಸಲುವಾಗಿ ಮೇಲಿನಂತೆ ಪೂರ್ಣ ಸ್ವರೂಪದಲ್ಲಿ ಕಳುಹಿಸಿಕೊಡುವ ಪ್ರಸ್ತಾವನೆಗಳನ್ನು ಮಾತ್ರ ಸ್ವೀಕರಿಸಲು ತೀರ್ಮಾನಿಸಿದೆ.

3. ಆದ್ದರಿಂದ ಶಿಸ್ತು ಪ್ರಕರಣಗಳಲ್ಲಿ ಸಿಆಸು ಇಲಾಖೆಗೆ ಪ್ರಸ್ತಾವನೆ ಸಲ್ಲಿಸುವಾಗ ದಿನಾಂಕ: 3.8.98 ಮತ್ತು 12.5.2003ರ ಸುತ್ತೋಲೆಗಳಲ್ಲಿ ತಿಳಿಸಿರುವ ಸೂಚನೆಗಳನ್ನು ಪಾಲಿಸುವುದರ ಜೊತೆಗೆ ಈ ಕೆಳಕಂಡ ಅಂಶಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

1. ಆಡಳಿತ ಇಲಾಖೆಯು ನಿರ್ದಿಷ್ಟ/ಖಚಿತವಾದ ದೋಷಾರೋಪಣೆಗಳ ಕರಡನ್ನು ತಯಾರಿಸಿ ಅದರಲ್ಲಿ ಅಧಿಕಾರಿಯು ಎಸಗಿರುವ ದುರ್ನಡತೆಯ ಸ್ಪಷ್ಟ ವಿವರಣೆ, ಸದರಿ ದುರ್ನಡತೆಯಿಂದ ಯಾವ ನಿಯಮಗಳನ್ನು/ ಕಾನೂನನ್ನು ಉಲ್ಲಂಘಿಸಲಾಗಿರುತ್ತದೆ ಎಂಬುದನ್ನು ಸ್ಪಷ್ಟವಾಗಿ ತಿಳಿಸಬೇಕು.
2. ಆಡಳಿತ ಇಲಾಖೆಗಳು ಸಿಆಸು ಇಲಾಖೆಗೆ ಪ್ರಸ್ತಾವನೆಯನ್ನು ಕಳುಹಿಸುವ ಮುನ್ನ ಸಂಬಂಧಪಟ್ಟ ಸಚಿವರ ಅನುಮೋದನೆಯನ್ನು ಪಡೆದು ಕಳುಹಿಸಬೇಕು.

3. ದೂರು ಇತ್ಯಾದಿ ಫಿರ್ಯಾದುಗಳನ್ನು ಯಥಾವತ್ತಾಗಿ ಸಿಆಸು ಇಲಾಖೆಗೆ ಕಳುಹಿಸಬಾರದು. ಅಂತಹ ದೂರುಗಳ ಬಗ್ಗೆ ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರ ವರದಿ/ ಅಭಿಪ್ರಾಯವನ್ನು ಪಡೆದು ಆಡಳಿತ ಇಲಾಖೆಯ ಸ್ಪಷ್ಟ ಅಭಿಪ್ರಾಯದೊಂದಿಗೆ ಕಳುಹಿಸಬೇಕು.
4. ನಿವೃತ್ತಿಯ ಅಂಚಿನಲ್ಲಿರುವ ಅಧಿಕಾರಿಗಳ ವಿರುದ್ಧ ಶಿಸ್ತು ಪ್ರಕರಣಗಳನ್ನು ಕಳುಹಿಸುವಲ್ಲಿ ಇಲಾಖೆಗಳು ಯಾವುದೇ ವಿಳಂಬವನ್ನು ಮಾಡಬಾರದು. ಹೀಗೆ ಕೊನೆಗಳಿಗೆಯಲ್ಲಿ ಪ್ರಸ್ತಾವನೆಗಳನ್ನು ಸಿ.ಆ.ಸು. ಇಲಾಖೆಗೆ ಕಳುಹಿಸಿದಲ್ಲಿ ಮತ್ತು ಅಂತಹ ವಿಚಾರಣೆಯು ಕಾಲಮಿತಿಯನ್ನು ಮೀರಿದ್ದಾದಲ್ಲಿ ವಿಳಂಬಕ್ಕೆ ಜವಾಬ್ದಾರರಾದ ನೌಕರರು/ ಅಧಿಕಾರಿಗಳನ್ನು ಗುರುತಿಸಿ ಅವರುಗಳ ವಿರುದ್ಧ ಕ್ರಮ ಜರುಗಿಸಲಾಗುವುದು.
5. ಶಿಸ್ತು ಪ್ರಾಧಿಕಾರಿಯಾದ ಸಿ.ಆ.ಸು. ಇಲಾಖೆಯು ಪ್ರಸ್ತಾವನೆಯ ಕುರಿತಂತೆ ಯಾವುದೇ ನಿರ್ಣಯ ಅಥವಾ ಸ್ಪಷ್ಟೀಕರಣವನ್ನು ಆಡಳಿತ ಇಲಾಖೆಗಳಿಗೆ ಸೂಚಿಸಿದ್ದ ಸಂದರ್ಭಗಳಲ್ಲಿ ಅಂತಹ ಕ್ರಮದ ಬಗ್ಗೆ ಆಡಳಿತ ಇಲಾಖೆಗಳು ನಿರ್ದೇಶನ ನೀಡುವುದಾಗಲೀ ಅಥವಾ ಸಿ.ಆ.ಸು. ಇಲಾಖೆಯ ಕ್ರಮವನ್ನು ಪ್ರಶ್ನಿಸುವ/ಟೀಕಿಸುವ ರೀತಿಯಲ್ಲಿ ಟಿಪ್ಪಣಿಗಳನ್ನು ಕಳುಹಿಸಿ ವಿಚಾರಣಾ ಪ್ರಕ್ರಿಯೆಯನ್ನು ವಿಳಂಬ ಮಾಡುವುದನ್ನು ಗಂಭೀರವಾಗಿ ಪರಿಗಣಿಸಿ ಜವಾಬ್ದಾರರಾದ ಅಧಿಕಾರಿಗಳ ವಿರುದ್ಧ ಕ್ರಮ ಜರುಗಿಸಲಾಗುತ್ತದೆ.
6. ಶಿಸ್ತು ಪ್ರಕರಣದ ಯಾವುದೇ ಹಂತದಲ್ಲಿ ಪ್ರಸ್ತಾವನೆ/ ಸ್ಪಷ್ಟೀಕರಣ/ಉತ್ತರಗಳನ್ನು ಸಿಆಸು ಇಲಾಖೆಗೆ ಕಳುಹಿಸುವ ಮುನ್ನ ತಪ್ಪದೇ ಇಲಾಖಾ ಕಾರ್ಯದರ್ಶಿಯವರ ಅನುಮೋದನೆಯನ್ನು ಪಡೆಯಬೇಕು.
7. ಆಡಳಿತ ಇಲಾಖೆಗಳು ಶಿಸ್ತು ಪ್ರಸ್ತಾವನೆಯನ್ನು ಸಿಆಸು ಇಲಾಖೆಗೆ ಕಳುಹಿಸುವಾಗ ದೋಷಾರೋಪಣೆಯ ಅನುಬಂಧ 3 ರಲ್ಲಿ ನಮೂದಿಸಿರುವ ಎಲ್ಲಾ ಮೂಲ ದಾಖಲೆಗಳನ್ನು ಕಳುಹಿಸಬೇಕು. ಹಾಗೂ ಇಂತಹ ದಾಖಲೆಗಳ ಒಂದು ಪ್ರತಿಯನ್ನು ಆಡಳಿತ ಇಲಾಖೆಯು ಉಳಿಸಿಕೊಳ್ಳುವುದು. ಶಿಸ್ತು ಪ್ರಕರಣವು ಅಂತಿಮಗೊಳ್ಳುವ ತನಕ ಮೂಲ ದಾಖಲೆಗಳನ್ನು ಆಡಳಿತ ಇಲಾಖೆಗಳಿಗೆ ಹಿಂತಿರುಗಿಸಲಾಗುವುದಿಲ್ಲ.

4. ಈ ಮೇಲೆ ತಿಳಿಸಿದ ಮಾರ್ಗಸೂಚಿಗಳನ್ನು ಅನುಸರಿಸದೆ ಅಪೂರ್ಣವಾದ ಶಿಸ್ತು ಕ್ರಮದ ಪ್ರಸ್ತಾವನೆಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಕಳುಹಿಸಿದ್ದು ಕಂಡು ಬಂದಲ್ಲಿ ಅಂತಹ ಅಪೂರ್ಣವಾದ ಪ್ರಸ್ತಾವನೆಯನ್ನು ಯಾವ ಮಟ್ಟದ ಅಧಿಕಾರಿಯಿಂದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಕಳುಹಿಸಲ್ಪಟ್ಟಿದೆಯೇ ಅಂತಹ ಅಧಿಕಾರಿಗಳ ವಿರುದ್ಧ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ/ ಅಪರ ಕಾರ್ಯದರ್ಶಿ/ ಸಹ ಕಾರ್ಯದರ್ಶಿ/ ಉಪ ಕಾರ್ಯದರ್ಶಿ/ ಅಧೀನ ಕಾರ್ಯದರ್ಶಿಗಳೂ ಸೇರಿದಂತೆ ನೇರವಾಗಿ ಶಿಸ್ತು ಕ್ರಮ ಪ್ರಾರಂಭಿಸಲ್ಪಡುವುದು ಎಂಬುದಾಗಿ ಈ ಮೂಲಕ ಸಂಬಂಧಪಟ್ಟವರೆಲ್ಲರಿಗೂ ತಿಳಿಸಿದೆ.

5. ಈ ಸುತ್ತೋಲೆಯನ್ನು ಮಾನ್ಯ ಮುಖ್ಯ ಮಂತ್ರಿಯವರ ಅನುಮೋದನೆ ಮೇರೆಗೆ ಹೊರಡಿಸಲಾಗಿದೆ.

**ಕೆ. ಕೆ. ಮಿಶ್ರ**

ಪಿ.ಆರ್. 273 ಸರ್ಕಾರದ ಮುಖ್ಯ ಕಾರ್ಯದರ್ಶಿ.

## ಲೋಕೋಪಯೋಗಿ ಸಚಿವಾಲಯ

### ಸರ್ಕಾರಿ ಆದೇಶ ಸಂಖ್ಯೆ: ಲೋಇ 62 ಪಿಡಬ್ಲ್ಯೂಸಿ 2004 ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2005

**ವಿಷಯ :** ಶ್ರೀ ಶಶಿಧರ ಎಂ. ಪಾಟೀಲ್, ಪದವೀಧರ ಇಂಜಿನಿಯರ್ (ಎಂ.ಆರ್.ಇ) ಇವರು ದಿನಾಂಕ: 1.2.2003ಕ್ಕೆ ದಿನಗೂಲಿ ನೌಕರರಾಗಿ ಹತ್ತು ವರ್ಷಗಳ ಸೇವೆ ಸಲ್ಲಿಸಿರುವುದರಿಂದ ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ: 13: ಎಸ್‌ಎಲ್‌ಸಿ: 94 ದಿನಾಂಕ: 29.9.94
2. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ: 357 ಪಿಡಬ್ಲ್ಯೂಸಿ 90 ದಿನಾಂಕ: 2.12.94
3. ಸರ್ಕಾರದ ಪತ್ರ ಸಂಖ್ಯೆ: ಪಿಡಬ್ಲ್ಯೂಡಿ 201 ಪಿಡಬ್ಲ್ಯೂಸಿ 95, ದಿನಾಂಕ: 2.7.94, 1.9.95 ಮತ್ತು 13.9.95.
4. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ 32 ಪಿಡಬ್ಲ್ಯೂಸಿ 95 (ಭಾಗ-1) ದಿನಾಂಕ: 20.8.96.
5. ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಇಂ: ಗ್ರಾಅಇಂಇ: ಸಿ-14(ಎ) 2004-05: 5045 ದಿನಾಂಕ: 17.11.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737:90, 738:90, 1038:90 ಮತ್ತು 297:91 ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ: 1.7.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಸಿ.ಆ.ಸು. ಇಲಾಖೆಯ ಆದೇಶಾನುಸಾರ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ 1.7.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ ಇಂಜಿನಿಯರ್‌ರನ್ನು ದಿನಾಂಕ: 29.9.94 ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ: 29.9.94ರ ಆದೇಶದಲ್ಲಿನ ಕಂಡಿಕೆ 6 ಮತ್ತು 7 ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಪದವೀಧರ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದಲೂ ಹಾಗೂ ಡಿಪ್ಲೋಮಾ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಆಯಾ ಮುಖ್ಯ ಇಂಜಿನಿಯರ್‌ರವರು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ಪತ್ರಗಳಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ ಇಂಜಿನಿಯರ್‌ಗಳನ್ನು ಕೋರಲಾಗಿದೆ.

ಅದರಂತೆ ಕ್ರಮ ಸಂಖ್ಯೆ: (5) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಿ.ಆ.ಸು. ಇಲಾಖೆಯ ಸಂಖ್ಯೆ: ಡಿಪಿಎಆರ್:13:ಎಸ್‌ಎಲ್‌ಸಿ 94 ದಿನಾಂಕ: 29.9.94 ಹಾಗೂ ಪಿಡಬ್ಲ್ಯೂಡಿ 32 ಪಿಡಬ್ಲ್ಯೂಸಿ 95 (ಭಾಗ-1) ದಿನಾಂಕ: 20.08.96ರ ಆದೇಶದನ್ವಯ ಮಾಸಿಕ ವೇತನದಡಿಯಲ್ಲಿ ಕೆಲಸ ಮಾಡುತ್ತಿರುವ ಪದವೀಧರ ಇಂಜಿನಿಯರ್‌ರನ್ನು ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಗಳಲ್ಲಿ ದಿನಾಂಕ: 1.7.84ರ ನಂತರ ಹಾಗೂ 15.10.92ಕ್ಕೆ ಮುಂಚೆ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ: 94 ದಿನಾಂಕ: 29.9.94 ಹಾಗೂ ಪಿಡಬ್ಲ್ಯೂಡಿ 32 ಪಿಡಬ್ಲ್ಯೂಸಿ 95 (ಭಾಗ-1) ದಿನಾಂಕ: 20.8.96ರ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಈ ಕೆಳಕಂಡ ಪದವೀಧರ ಇಂಜಿನಿಯರ್‌ರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| ಕ್ರ. ಸಂ. | ಹೆಸರು | ಜನ್ಮ ದಿನಾಂಕ | ಬಿ.ಇ. ಪಾಸಾದ ದಿನಾಂಕ | 10 ವರ್ಷ ಸೇವೆ ಪೂರೈಸಿದ ದಿನಾಂಕ | ಕ್ರಮಬದ್ಧ ಗೊಂಡ ದಿನಾಂಕ | ಕಾರ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|---|---|---|
| 1. | ಶ್ರೀ ಶಶಿಧರ ಎಂ. ಪಾಟೀಲ್ ಪದವೀಧರ ಇಂಜಿನಿಯರ್ | 1.6.1965 | ಜನವರಿ 1993 | ಜನವರಿ 2003 | 1.2.2003 | ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಸುರಪುರ |

ಸದರಿ ನೌಕರರು ಸತತ 10 ವರ್ಷಗಳ ದಿನಗೂಲಿ ಸೇವೆಯನ್ನು ಪೂರೈಸಿದ ದಿನಾಂಕದಿಂದಲೇ ಆರ್ಥಿಕ (ಕಾಲ್ಪನಿಕವಾಗಿ) ಹಾಗೂ ಸೇವಾ ಹಿರಿತನ ಸೌಲಭ್ಯಗಳನ್ನು ಪಡೆಯಲು ಅರ್ಹರಾಗಿರುತ್ತಾರೆ. ಆ ದಿನಾಂಕದಿಂದ ಅವರಿಗೆ ಸೇವಾ ಹಿರಿತನ ಹಾಗೂ ವೇತನವನ್ನು Notional ಆಗಿ ನಿಗದಿಪಡಿಸುವುದು (Without any arreas of pay ಯಾವುದೇ ಹಿಂದಿನ ಬಾಕಿ ವೇತನಕ್ಕೆ ಅರ್ಹರಲ್ಲ).

ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ ಮೇಲ್ಕಂಡ ಸಹಾಯಕ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರು ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರಲ್ಲಿ ಕಾರ್ಯವರದಿ ಮಾಡುವುದು.

ಈ ಆದೇಶವನ್ನು ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ: 29.9.94ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಚಂದ್ರಶೇಖರಪ್ಪ**

ಪಿ.ಆರ್.300 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸೇವೆಗಳು-ಸಿ).

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ :** ಬೆಂಗಳೂರು ಮತ್ತು ಧಾರವಾಡ ಕೃಷಿ ವಿಶ್ವವಿದ್ಯಾನಿಲಯಗಳಲ್ಲಿ ಕೃಷಿ ಕ್ಷೇತ್ರದ ಸಂಶೋಧನೆಯ ಪುನರಾವಲೋಕನ ಸಮಿತಿಗೆ ವರದಿ ಸಲ್ಲಿಸಲು ಹೆಚ್ಚಿನ ಕಾಲಾವಕಾಶ ನೀಡುವ ಬಗ್ಗೆ.

**ಓದಲಾಗಿದೆ :**
1. ದಿನಾಂಕ: 5.2.2004ರ ಸರ್ಕಾರಿ ಆದೇಶ ಸಂ: ಕೃತೋಇ 24 ಕೃವಿವಿ 2004.
2. ದಿನಾಂಕ: 20.3.2004ರ ಶ್ರೀ ಜೆ. ಕೆ. ಅರೋರ, ಅಧ್ಯಕ್ಷರು, ಕೃಷಿ ಕ್ಷೇತ್ರದ ಸಂಶೋಧನೆಯ ಪುನರಾವಲೋಕನ ಸಮಿತಿ ರವರ ಪತ್ರ.
3. ಸರ್ಕಾರಿ ಆದೇಶ ಸಂಖ್ಯೆ:ಕೃತೋಇ 63 ಕೃವಿವಿ 2004 ದಿನಾಂಕ: 6.4.2004 ಮತ್ತು 6.9.2004.
4. ದಿನಾಂಕ: 9.2.2005ರ ಶ್ರೀ ಜೆ. ಕೆ. ಅರೋರ, ಅಧ್ಯಕ್ಷರು, ಕೃಷಿ ಕ್ಷೇತ್ರದ ಸಂಶೋಧನೆಯ ಪುನರಾವಲೋಕನ ಸಮಿತಿ ರವರ ಪತ್ರ.

**ಪ್ರಸ್ತಾವನೆ:**

ಬೆಂಗಳೂರು ಮತ್ತು ಧಾರವಾಡ ಕೃಷಿ ವಿಶ್ವವಿದ್ಯಾನಿಲಯಗಳು ಕೃಷಿ ಕ್ಷೇತ್ರದಲ್ಲಿ ನಡೆಸಿರುವ ಸಂಶೋಧನೆಗಳ ಬಗ್ಗೆ ಅಧ್ಯಯನ ನಡೆಸಿ, ಸಲಹೆ ಮತ್ತು ಶಿಫಾರಸ್ಸುಗಳನ್ನು ನೀಡಲು 8 ಸದಸ್ಯರೊಳಗೊಂಡಂತೆ ಶ್ರೀ ಜೆ. ಕೆ. ಅರೋರ ನಿವೃತ್ತ ಅಭಿವೃದ್ಧಿ ಆಯುಕ್ತರು, ಕರ್ನಾಟಕ ಸರ್ಕಾರ ಇವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ಓದಲಾದ (1)ರ ಆದೇಶದಲ್ಲಿ ರಚಿಸಿ ಸದರಿ ಸಮಿತಿಯು ಎರಡು ತಿಂಗಳೊಳಗೆ ವರದಿಯನ್ನು ಸಲ್ಲಿಸತಕ್ಕದ್ದೆಂದು ಆದೇಶಿಸಲಾಗಿತ್ತು.

ಈ ಅವಧಿಯೊಳಗೆ ವರದಿ ಸಲ್ಲಿಸಲು ಸಾಧ್ಯವಾಗದೇ ಇರುವುದರಿಂದ ದಿನಾಂಕ: 31.10.2004ರ ವರೆಗೆ ವರದಿ ಸಲ್ಲಿಸಲು ಕಾಲಾವಕಾಶ ನೀಡುವಂತೆ ಸಮಿತಿಯ ಅಧ್ಯಕ್ಷರು ಓದಲಾದ (2)ರ ಪತ್ರದಲ್ಲಿ ಸರ್ಕಾರವನ್ನು ಕೋರಿದ್ದರು. ಅಧ್ಯಕ್ಷರ ವರದಿಯಂತೆ ದಿನಾಂಕ: 6.4.2004ರ ಆದೇಶದಲ್ಲಿ ಸಮಿತಿಯ ಅವಧಿಯನ್ನು ಜೂನ್ 30, 2004ರ ವರೆಗೆ ವಿಸ್ತರಿಸಲಾಗಿತ್ತು. ಪುನಃ ಸಮಿತಿಯ ಅಧ್ಯಕ್ಷರು ಈ ಅವಧಿಯನ್ನು 31.12.2004ರ ವರೆಗೆ ವಿಸ್ತರಿಸಲು ಕೋರಿದ್ದು, ದಿನಾಂಕ: 6.9.2004ರ ಆದೇಶದಲ್ಲಿ ದಿನಾಂಕ ಡಿಸೆಂಬರ್ 31, 2004ರ ವರೆಗೆ ವಿಸ್ತರಿಸಿ ಈ ಅವಧಿಯಲ್ಲಿಯೇ ಸಮಿತಿಯು ವರದಿ ಸಲ್ಲಿಸಬೇಕೆಂದು ತಿಳಿಸಲಾಗಿದೆ.

ಮೇಲೆ ಓದಲಾದ (4)ರ ಪತ್ರದಲ್ಲಿ ಶ್ರೀ ಜೆ. ಕೆ. ಅರೋರಾ ರವರು ಸಮಿತಿಯು ದಿನಾಂಕ ಡಿಸೆಂಬರ್ 31, 2004ಕ್ಕೆ ಮುಂಚೆ ವರದಿ ಸಲ್ಲಿಸಲು ಕೆಲವಾರು ಕಾರಣಗಳಿಂದ ಸಾಧ್ಯವಾಗಿಲ್ಲವೆಂದು ಇತ್ತೀಚೆಗೆ ವರದಿಯನ್ನು ಮಾನ್ಯ ಕೃಷಿ ಸಚಿವರಿಗೆ ಸಲ್ಲಿಸಲಾಗಿದೆಯೆಂದು ತಿಳಿಸಿ ಸಮಿತಿಯ ಅವಧಿಯನ್ನು ದಿನಾಂಕ ಫೆಬ್ರವರಿ 15, 2005ರ ವರೆಗೆ ವಿಸ್ತರಿಸಲು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂ: ಕೃತೋಇ 63 ಕೃವಿವಿ 2004, ಬೆಂಗಳೂರು, ದಿನಾಂಕ: 24ನೇ ಫೆಬ್ರವರಿ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಬೆಂಗಳೂರು ಮತ್ತು ಧಾರವಾಡ ಕೃಷಿ ವಿಶ್ವವಿದ್ಯಾನಿಲಯಗಳು ಕೃಷಿ ಕ್ಷೇತ್ರದಲ್ಲಿ ನಡೆಸಿರುವ ಸಂಶೋಧನೆಗಳ ಬಗ್ಗೆ ಸಂಪೂರ್ಣವಾಗಿ ಪುನರ್ ಪರಿಶೀಲನೆ ನಡೆಸಲಾದ ಸಂಶೋದನೆಯ ಉಪಯುಕ್ತತೆ ಮತ್ತು ಬಳಸುವ ಬಗ್ಗೆ ವರದಿ ಸಲ್ಲಿಸಲು ಸದರಿ ಸಮಿತಿಗೆ ಕಾಲಾವಕಾಶವನ್ನು ಫೆಬ್ರವರಿ 15, 2005ರ ವರೆಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ಕೆ. ಗುರಾಣಿ**

ಪಿ.ಆರ್.312 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** ಒನಕೆ ಓಬವ್ವ ಮಹಿಳಾ ಸಹಕಾರ ಬ್ಯಾಂಕ್ ನಿ., ಚಿತ್ರದುರ್ಗ, ಇದರ ವಾರ್ಷಿಕ ಸರ್ವಸದಸ್ಯರ ಮಹಾಸಭೆಯನ್ನು ಮುಂದೂಡಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 27(1)ರ ಅಡಿಯಲ್ಲಿ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** 1. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಯುಬಿಸಿ:5:107: ಜಿಬಿಎಂ: 2004-05 ದಿನಾಂಕ: 5.10.2004.

**ಪ್ರಸ್ತಾವನೆ:**

ಒನಕೆ ಓಬವ್ವ ಮಹಿಳಾ ಸಹಕಾರ ಬ್ಯಾಂಕ್ ನಿ. ಚಿತ್ರದುರ್ಗ, ಇದರ 2002-03ರ ವಾರ್ಷಿಕ ಸರ್ವಸದಸ್ಯರ ಮಹಾಸಭೆಯನ್ನು ನಡೆಸಲು ಮಾರ್ಚಿ 2005ರವರೆಗೆ ಮುಂದೂಡಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 27(1)ರ ಅಡಿಯಲ್ಲಿ ಅನುಮತಿ ನೀಡಲು ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವವನ್ನು ಕೂಲಂಕುಶವಾಗಿ ಪರಿಶೀಲಿಸಿ, ಬ್ಯಾಂಕಿನ ಆಡಳಿತಾತ್ಮಕ ಹಾಗೂ ಆರ್ಥಿಕ ಹಿತದೃಷ್ಟಿಯಿಂದ ಒನಕೆ ಓಬವ್ವ ಮಹಿಳಾ ಸಹಕಾರ ಬ್ಯಾಂಕ್ ನಿ., ಚಿತ್ರದುರ್ಗ ಇದರ ಸರ್ವಸದಸ್ಯರ ಮಹಾಸಭೆಯನ್ನು ಮಾರ್ಚಿ 2005ರೊಳಗೆ ನಡೆಸಲು ಅನುವಾಗುವಂತೆ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 180 ಸಿಎಲ್ಎಂ 2004 ಬೆಂಗಳೂರು ದಿನಾಂಕ: 11ನೇ ಫೆಬ್ರವರಿ 2005**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಒನಕೆ ಓಬವ್ವ ಮಹಿಳಾ ಸಹಕಾರ ಬ್ಯಾಂಕ್ ನಿ., ಚಿತ್ರದುರ್ಗ ಇದರ 2002-03ನೇ ಸಾಲಿನ ವಾರ್ಷಿಕ ಸರ್ವಸದಸ್ಯರ ಮಹಾಸಭೆಯನ್ನು ನಡೆಸಲು ದಿನಾಂಕ: 31.03.2005ರ ವರೆಗೆ ಕಾಲಾವಕಾಶ ನೀಡಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ

**27ರ ಪ್ರಕರಣದಲ್ಲಿ:**

27ನೇ ಪ್ರಕರಣದ ಉಪ ಪ್ರಕರಣ (1)ರ ಪರಂತುಕದಲ್ಲಿನ 'ಆರು ತಿಂಗಳು' ಎಂಬ ಪದಗಳಿಗೆ ಬದಲಾಗಿ 'ಹದಿನೆಂಟು ತಿಂಗಳು' ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ :** ಪ್ರಕರಣ 27(1)ಕ್ಕೆ ಮಾಡಿದ ಮಾರ್ಪಾಡು ದಿನಾಂಕ: 31.03.2005ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ಕ್ಕೆ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

ಪಿ.ಆರ್.313

## ಲೋಕೋಪಯೋಗಿ ಸಚಿವಾಲಯ

**ಸರ್ಕಾರಿ ಆದೇಶ ಸಂಖ್ಯೆ: ಲೋಇ 61 ಪಿಡಬ್ಲ್ಯೂಸಿ 2003 ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2005**

**ವಿಷಯ :** ಶ್ರೀ ಗುಡುಮಾಲಾ ನಿಂಗಾರೆಡ್ಡಿ, ಪದವೀಧರ ಇಂಜಿನಿಯರ್ (ಎಂಆರ್ಇ) ಇವರು ದಿನಾಂಕ: 1.2.1998ಕ್ಕೆ ದಿನಗೂಲಿ ನೌಕರರಾಗಿ ಹತ್ತು ವರ್ಷಗಳ ಸೇವೆ ಸಲ್ಲಿಸಿರುವುದರಿಂದ ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ: 13: ಎಸ್ಎಲ್ಸಿ: 94 ದಿನಾಂಕ: 29.9.94
2. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ: 357 ಪಿಡಬ್ಲ್ಯೂಸಿ 90 ದಿನಾಂಕ: 2.12.94
3. ಸರ್ಕಾರದ ಪತ್ರ ಸಂಖ್ಯೆ: ಪಿಡಬ್ಲ್ಯೂಡಿ 201 ಪಿಡಬ್ಲ್ಯೂಸಿ 95, ದಿನಾಂಕ: 2.7.94, 1.9.95 ಮತ್ತು 13.9.95.
4. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉ) ಧಾರವಾಡ ಇವರ ಪತ್ರ ಸಂಖ್ಯೆ: ಸಿಬಿಎನ್: ಸಿ-10: ದಿನಗೂಲಿ-43: ಸಕ್ರಮ: 2003-04: 6505 ದಿನಾಂಕ: 4.11.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737:90, 738:90, 1038:90 ಮತ್ತು 297:91 ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ: 1.7.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಸಿ.ಆ.ಸು. ಇಲಾಖೆಯ ಆದೇಶಾನುಸಾರ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ 1.7.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ ಇಂಜಿನಿಯರ್‌ರನ್ನು ದಿನಾಂಕ: 29.9.94 ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ: 29.9.94ರ ಆದೇಶದಲ್ಲಿನ ಕಂಡಿಕೆ 6 ಮತ್ತು 7 ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಪದವೀಧರ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದಲೂ ಹಾಗೂ ಡಿಪ್ಲೋಮಾ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಆಯಾ ಮುಖ್ಯ ಇಂಜಿನಿಯರ್‌ರವರು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ಪತ್ರಗಳಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ ಇಂಜಿನಿಯರ್‌ಗಳನ್ನು ಕೋರಲಾಗಿದೆ.

ಅದರಂತೆ ಕ್ರಮ ಸಂಖ್ಯೆ: (4) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉ) ಧಾರವಾಡ ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಿ.ಆ.ಸು.ಇಲಾಖೆಯ ಸಂಖ್ಯೆ: ಡಿಪಿಎಆರ್:13:ಎಸ್‌ಎಲ್‌ಸಿ 94 ದಿನಾಂಕ: 29.9.94 ಹಾಗೂ ಪಿಡಬ್ಲ್ಯೂಡಿ 357 ಪಿಡಬ್ಲ್ಯೂಸಿ 90 ದಿನಾಂಕ: 2.12.94ರ ಆದೇಶದನ್ವಯ ಮಾಸಿಕ ವೇತನದಡಿಯಲ್ಲಿ ಕೆಲಸ ಮಾಡುತ್ತಿರುವ ಪದವೀಧರ ಇಂಜಿನಿಯರ್‌ರನ್ನು ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಗಳಲ್ಲಿ ದಿನಾಂಕ: 1.7.84ರ ನಂತರ ಹಾಗೂ 15.10.92ಕ್ಕೆ ಮುಂಚೆ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ: 94 ದಿನಾಂಕ: 29.9.94 ಹಾಗೂ ಪಿಡಬ್ಲ್ಯೂಡಿ 357 ಪಿಡಬ್ಲ್ಯೂಸಿ 90 ದಿನಾಂಕ: 2.12.94ರ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಈ ಕೆಳಕಂಡ ಪದವೀಧರ ಇಂಜಿನಿಯರ್‌ರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| ಕ್ರ. ಸಂ. | ಹೆಸರು | ಜನ್ಮ ದಿನಾಂಕ | ಬಿ.ಇ. ಪಾಸಾದ ದಿನಾಂಕ | ದಿನಗೂಲಿ ಸೇವೆಗೆ ಸೇರಿದ ದಿನಾಂಕ | 10 ವರ್ಷ ಸೇವೆ ಪೂರೈಸಿದ ದಿನಾಂಕ | ಕ್ರಮಬದ್ಧ ಗೊಂಡ ದಿನಾಂಕ | ಕಾರ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|---|---|---|---|
| 1. | ಶ್ರೀ ಗುಡುಮಾಲ ನಿಂಗಾರೆಡ್ಡಿ, ಪದವೀಧರ ಇಂಜಿನಿಯರ್ | 21.7.59 | ಜನವರಿ 1985 | 2.2.1988 | 1.2.1998 | 2.2.1998 | ಲೋಇ ಉಪ ವಿಭಾಗ, ಸೇಡಂ. |

ಸದರಿ ನೌಕರರು ಸತತ 10 ವರ್ಷಗಳ ದಿನಗೂಲಿ ಸೇವೆಯನ್ನು ಪೂರೈಸಿದ ದಿನಾಂಕದಿಂದಲೇ ಆರ್ಥಿಕ (ಕಾಲ್ಪನಿಕವಾಗಿ) ಹಾಗೂ ಸೇವಾ ಹಿರಿತನ ಸೌಲಭ್ಯಗಳನ್ನು ಪಡೆಯಲು ಅರ್ಹರಾಗಿರುತ್ತಾರೆ. ಆ ದಿನಾಂಕದಿಂದ ಅವರಿಗೆ ಸೇವಾ ಹಿರಿತನ ಹಾಗೂ ವೇತನವನ್ನು Notional ಆಗಿ ನಿಗದಿಪಡಿಸುವುದು (Without any arreas of pay) ಯಾವುದೇ ಹಿಂದಿನ ಬಾಕಿ ವೇತನಕ್ಕೆ ಅರ್ಹರಲ್ಲ).

ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ ಮೇಲ್ಕಂಡ ಸಹಾಯಕ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉ) ಧಾರವಾಡ ಇವರ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉ) ಧಾರವಾಡ ಇವರಲ್ಲಿ ಕಾರ್ಯವರದಿ ಮಾಡುವುದು.

ಈ ಆದೇಶವನ್ನು ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ: 29.9.94ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಚಂದ್ರಶೇಖರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸೇವೆಗಳು-ಸಿ).

ಪಿ.ಆರ್.314

**ಕಾನೂನು ಸಚಿವಾಲಯ**

**ವಿಷಯ :** ಬೆಂಗಳೂರು ನಗರ ಸಿವಿಲ್ ನ್ಯಾಯಾಲಯದಲ್ಲಿನ ಬೆರಳಚ್ಚುಯಂತ್ರ ಮೆಕಾನಿಕ್ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಲಾ 28 ಎಲ್‌ಎಸಿ 96, ದಿನಾಂಕ: 30.4.1996
2. ಸರ್ಕಾರದ ಆದೇಶ ಸಂಖ್ಯೆ: ಲಾ 197 ಎಲ್‌ಎಸಿ 2003 ದಿನಾಂಕ: 26.12.2003
3. ಕರ್ನಾಟಕ ಉಚ್ಚ ನ್ಯಾಯಾಲಯದ ಅಸಿಸ್ಟೆಂಟ್ ರಿಜಿಸ್ಟ್ರಾರ್ ರವರ ಪತ್ರಸಂಖ್ಯೆ: ಎಲ್‌ಸಿಎ-2: 32:96 ದಿನಾಂಕ: 20.10.2003

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಬೆಂಗಳೂರು ನಗರ ಸಿವಿಲ್ ನ್ಯಾಯಾಲಯಗಳ ಬೆರಳಚ್ಚು ಯಂತ್ರಗಳ ರಿಪೇರಿಗಾಗಿ ಒಂದು ಬೆರಳಚ್ಚು ಯಂತ್ರ ಮೆಕಾನಿಕ್ ಹುದ್ದೆಯನ್ನು ಸೃಜಿಸಲು ಮಂಜೂರಾತಿ ನೀಡಿದ್ದು, ಸದರಿ ಹುದ್ದೆಯ ಕಾರ್ಯಾವಧಿಯನ್ನು ಮೇಲೆ ಓದಲಾದ (2)ರ ಆದೇಶದಲ್ಲಿ ದಿನಾಂಕ: 30.4.2003 ರಿಂದ ಎರಡು ವರ್ಷಗಳ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

ಮೇಲೆ ಓದಲಾದ (3)ರ ಕರ್ನಾಟಕ ಉಚ್ಚ ನ್ಯಾಯಾಲಯದ ಅಸಿಸ್ಟೆಂಟ್ ರಿಜಿಸ್ಟ್ರಾರ್ ರವರ ಪತ್ರವನ್ನು ಪುನರ್ ಪರಿಶೀಲಿಸಲಾಗಿ ಬೆರಳಚ್ಚುಗಾರರ ವೃಂದಬಲ ಹೆಚ್ಚಿಸಲು ಯಾವುದೇ ಸಮರ್ಥನೆ ನೀಡಿರುವುದಿಲ್ಲ. ಈ ಹುದ್ದೆಯನ್ನು ಮುಂದುವರೆಸುವ ಬಗ್ಗೆ ಅಥವಾ ಬೆರಳಚ್ಚುಗಾರರ ಹುದ್ದೆಗೆ ಪರಿವರ್ತಿಸುವ ಬಗ್ಗೆ ಸಮರ್ಥನೀಯ ಹಾಗೂ ಬಲವಾದ ಕಾರಣಗಳು ಕಂಡುಬರುವುದಿಲ್ಲವಾದ್ದರಿಂದ ಈ ಹುದ್ದೆಯನ್ನು ಮುಂದುವರಿಸದಿರಲು ತೀರ್ಮಾನಿಸಿ ಮೇಲೆ ಓದಲಾದ (2)ರ ಆದೇಶದಲ್ಲಿ ಮುಂದುವರೆಸಲಾದ ಅವಧಿಯನ್ನು ಕಡಿತಗೊಳಿಸಿ ಈ ಕೆಳಕಂಡಂತೆ ಆದೇಶ ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 197 ಎಲ್‌ಎಸಿ 2003 ಬೆಂಗಳೂರು ದಿನಾಂಕ: 24ನೇ ಜನವರಿ 2005**

ಬೆಂಗಳೂರು ನಗರ ಸಿವಿಲ್ ನ್ಯಾಯಾಲಯಗಳ ಬೆರಳಚ್ಚು ಯಂತ್ರಗಳ ದುರಸ್ತಿಯ ಕಾರ್ಯನಿರ್ವಹಣೆಗಾಗಿ ಸೃಜಿಸಲಾಗಿರುವ ಬೆರಳಚ್ಚು ಯಂತ್ರದ ಒಂದು ಮೆಕಾನಿಕ್ ಹುದ್ದೆಯ ಕಾರ್ಯಾವಧಿಯನ್ನು ದಿನಾಂಕ: 26.12.2003ರ ಸರ್ಕಾರಿ ಆದೇಶ ಸಂಖ್ಯೆ: ಲಾ 197 ಎಲ್‌ಎಸಿ 2003ರಲ್ಲಿ ದಿನಾಂಕ: 29.4.2005 ರವರೆಗೆ ಮುಂದುವರೆಸಲಾಗಿದ್ದು, ಸದರಿ ಹುದ್ದೆಯ ಕಾರ್ಯಾವಧಿಯನ್ನು ದಿನಾಂಕ: 29.4.2005ರ ಬದಲಾಗಿ ದಿನಾಂಕ: 31.1.2005ಕ್ಕೆ ಮಿತಗೊಳಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 27 ವೆಚ್ಚ-7 2004, ದಿನಾಂಕ: 30.3.2004 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಿಕ್ಕಹನುಮಂತಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

ಪಿ.ಆರ್.315

**ನಗರಾಭೀವೃದ್ಧಿ ಸಚಿವಾಲಯ**

**ವಿಷಯ :** ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿಯ ಶೇಕಡ 100 ರಷ್ಟು ಕಿರಿಯ ಅಭಿಯಂತರ ಹುದ್ದೆಗಳಲ್ಲಿ ಶೇ.10 ರಷ್ಟು ಹುದ್ದೆಗಳನ್ನು ಬಡ್ತಿ ಮೂಲಕ ತುಂಬಲು ಇರುವ ವೃಂದ, ನೇಮಕಾತಿ ಮತ್ತು ಬಡ್ತಿ ನಿಯಮಗಳು 1981ಕ್ಕೆ ತಿದ್ದುಪಡಿ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಯುಡಿ 104 ಎಮ್‌ಎನ್‌ಐ 81 ದಿನಾಂಕ: 30.04.1982.
2. ಮುಖ್ಯ ಆಡಳಿತಾಧಿಕಾರಿ ಹಾಗೂ ಕಾರ್ಯದರ್ಶಿ, ಬೆಂಗಳೂರು ಜಲಮಂಡಲಿ ಇವರ ಪತ್ರ ಸಂಖ್ಯೆ: ಬೆಂ.ಜ.ಮಂ/ 71-32 02/2265/2004-05 ದಿನಾಂಕ: 26.10.2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 30.04.1982 ರ ಆದೇಶದಲ್ಲಿ ಬೆಂಗಳೂರು ಜಲಮಂಡಳಿಯ ವೃಂದ, ನೇಮಕಾತಿ ಮತ್ತು ಬಡ್ತಿ ನಿಯಮಗಳಲ್ಲಿ ಕಿರಿಯ ಅಭಿಯಂತರರ ಹುದ್ದೆಗಳನ್ನು ಶೇಕಡ 100 ರಷ್ಟು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅವಕಾಶ ಕಲ್ಪಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ: 26.10.2004ರ ಪತ್ರದಲ್ಲಿ ಮುಖ್ಯ ಆಡಳಿತಾಧಿಕಾರಿ ಹಾಗೂ ಕಾರ್ಯದರ್ಶಿ, ಬೆಂಗಳೂರು ಜಲಮಂಡಲಿ, ಇವರು ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿಯ ವೃಂದ, ನೇಮಕಾತಿ ಮತ್ತು ಬಡ್ತಿ ನಿಯಮಗಳು 1981ನ್ನು ಮಂಡಲಿಯು ಸಮಗ್ರವಾಗಿ ಪುನರಾವಲೋಕಿಸಲ್ಪಟ್ಟು ತಾಂತ್ರಿಕ ಅರ್ಹತೆಯುಳ್ಳ ಲಿಪಿಕ ವರ್ಗದ (ಗ್ರೂಪ್-ಸಿ) ನೌಕರರಿಗೆ ಬಡ್ತಿ ಅವಕಾಶ ನೀಡುವ ಉದ್ದೇಶದಿಂದ ಶೇಕಡ 10 ರಷ್ಟು ಹುದ್ದೆಗಳನ್ನು ಬಡ್ತಿ ಮೂಲಕ ತುಂಬಲು ನಿರ್ಧರಿಸಿ ಅಂತೆಯೇ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದೆ.

ಬೆಂಗಳೂರು ಜಲಮಂಡಲಿಯ ವೃಂದ, ನೇಮಕಾತಿ ಮತ್ತು ಬಡ್ತಿ ನಿಯಮಗಳಿಗೆ ತಿದ್ದುಪಡಿ ತರುವ ಪ್ರಸ್ತಾವನೆ ಕುರಿತು ದಿನಾಂಕ: 6.1.2005 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತಾಂತ್ರಿಕ ಅರ್ಹತೆಯುಳ್ಳ ಮಂಡಲಿಯ ಲಿಪಿಕ ನೌಕರರಿಗೆ ಬಡ್ತಿ ನೀಡುವ ಅವಕಾಶ ಕಲ್ಪಿಸುವ ಉದ್ದೇಶದಿಂದ ಮಂಡಲಿಯ ಪ್ರಸ್ತಾವನೆಯನ್ನು ಪರಿಗಣಿಸಿ ಈ ಪ್ರಸ್ತುತ ಜಾರಿಯಲ್ಲಿರುವ ವೃಂದ, ನೇಮಕಾತಿ ಮತ್ತು ಬಡ್ತಿ ನಿಯಮಗಳಿಗೆ ತಿದ್ದುಪಡಿಯನ್ನು ಬಾಕಿ ಇಟ್ಟು ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 195 ಎಮ್‌ಎನ್‌ಐ 2004 ಬೆಂಗಳೂರು ದಿನಾಂಕ: 1ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಬೆಂಗಳೂರು ಜಲಮಂಡಲಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ತಾಂತ್ರಿಕ ವಿದ್ಯಾರ್ಹತೆಯುಳ್ಳ ಲಿಪಿಕ ವರ್ಗದ (ಗ್ರೂಪ್-ಸಿ) ನೌಕರರಿಗೆ ಕಿರಿಯ ಅಭಿಯಂತರರ ಹುದ್ದೆಗೆ ಬಡ್ತಿ ಅವಕಾಶ ಕಲ್ಪಿಸುವ ಉದ್ದೇಶದಿಂದ ಜಲಮಂಡಲಿಯ ವೃಂದ, ನೇಮಕಾತಿ ಮತ್ತು ಬಡ್ತಿ ನಿಯಮಗಳಿಗೆ ತಿದ್ದುಪಡಿ ಕಾಯ್ದಿರಿಸಿ ಈ ಆದೇಶಕ್ಕೆ ಲಗತ್ತಿಸಿದ ಅನುಬಂಧದಲ್ಲಿ ಇರುವಂತೆ ನೇಮಕಾತಿ ವಿಧಾನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿಗದಿಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವ್ಹಿ. ಆರ್. ಇಲಕಲ್**
ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ANNEXURE (G.O.No. UDD 195 MNI 2004 Dated: 1st March 2005**

| Sl. No. | Designation and Scale of pay of the post | No of Posts | Method of Recruitment | Qualification and experience. |
|---|---|---|---|---|
| 1 | Junior Engineer (Rs.4900-12225) | 88 (Permanent) | 90% by Direct Recruitment.<br><br>10% by promotion from the Ministerial cadre staff I(Group C) of the Board, possessing requisite qualification. | For Direct Recruitment and for Promotion:<br>(i) 3 years Diploma in Engg. Or Technology or equivalent with some experience preferably in Public Health Engg.<br>(ii) 6 months duration course in Computer Science. |

**V. R. ILKAL**
PR-317 Under Secretary to Government, Urban Development Department.

**HOME SECRETARIAT**

**ORDER No. HD 65 PPE 2005, BANGALORE, DATED: 26th FEBRUARY, 2005**

**Sub :** Authorisation of Sri. K. Janardhan, Deputy Director of Prosecution, to conduct the Case No. SC. 489/2004 pending on the file of 23rd Additional City Civil and Sessions Court, CCH-24, Bangalore.

**Read :** Letter No. DPN:ADM:52/2004-05 dated: 15.06.2004. from the Director of Prosecutions, Bangalore.

Sri K. Janardhan, Deputy Director of Prosecution, Bangalore City Division, Bangalore, is hereby authorised to appear as Special Public Prosecutor to conduct the Case No. SC. 489/2004 pending on the file of 23rd Additional City Civil and Sessions Court, CCH-24, Bangalore.

By Order and in the Name of the Governor of Karnataka,
**R. A. KULKARNI**
PR-316 Under Secretary to Government, Home Department, (Law and Order and Prosecution).

**FOREST,ECOLOGY AND ENVIRONMENT SECRETARIAT**

**Subject:** Diversion of 27.72 ha of forest land for construction 220 KV DC transmission line from Hubli-Belgaum- Narendra(Hubli 2nd Stage) in Dharwad District.

**Read:**
1. Letter No.A5(2)GFI.CR.149/94-95, dated 6/8.7.1998 and 10.1.2001, 24.12.2003 of Principal Chief Conservator of Forests, Bangalore.
2. State Government letter No.FEE 142 FGL 98, dated :26.8.98 14.11.2004 and 6.4.2004.
3. Letter No. 8-16/99-FC/1229/85, dated: 1.5.2001 and 14.6.2004 of Government of India, Ministry of Environment and Forests, F.C. Division, New Delhi.

**PREAMBLE:**

The Principal Chief Conservator of Forests, Bangalore vide his letter dated 6/8.7.1998 read at (1) above has submitted a proposal to State Government for diversion of an area 27.72 ha. of forest land in Belgaum reserve forest under Forest (Conservation) Act 1980, for construction of 220 KV DC transmission line from Hubli-Belgaum-Narendra(Hubli 2nd Stage) in Dharwad District in favour of Karnataka Power Transmission Corporation Limited, Belgaum..

Accordingly, the proposal was recommended to Government of India for approval under section (2) of Forest (Conservation) Act 1980 vide State Government letter dated: 26.8.98 read at (2) above

The Government of India, Ministry of Environment and Forests, New Delhi has agreed to the proposal in principle (Stage-I) vide their letter dated 1.5.2001 read at (3) above subject to certain conditions.

The compliance report on the condition has been sent to Government of India vide State Government letter dated 6.4..2004 read at (2) above.

The Government of India, Ministry of Environment and Forests, New Delhi in their letter dated: 14.6.2004 read at (3) above has conveyed its final approval (Stage-II) in accordance with Section 2 of Forest(Conservation)Act,1980 for the diversion of 27.72 ha. of forest land for construction of 220 DC transmission line from Hubli-Belgaum-Narendra(Hubli 2nd Stage) in Dharwad District in favour of Karnataka Power Transmission Corporation Ltd., Hubli with certain conditions.

The proposal has been examined in the light of the final approval given by the Government of India and the following orders are issued.

**GOVERNMENT ORDER NO. FEE 142 FGL 98, BANGALORE, DATED: 24th January 2005**

After careful consideration of the proposal and under the circumstances explained in the preamble Government are pleased to accord approval under section (2) of Forest (Conservation) Act 1980 for diversion of 27.72 ha. of forest land for construction of 220 KV DC transmission line from Hubli-Belgaum-Narendra(Hubli 2nd Stage) in favour of Karnataka Power Transmission Corporation Ltd., Hubli subject to the following conditions.

1. The legal status of forest land shall remain unchanged.
2. The Compensatory afforestation shall be raised and maintained over equivalent non-forest land at the project cost..
3. The non-forest land for compensatory afforestation shall be notified by the State Government as RF under Section-4 or PF under section-29 of the Indian Forest Act,1927or the State Forest Act within a period of 6 months and Nodal Officer(Forest Conservation) shall report the compliance.
4. Penal compensatory afforestation shall be ranged and maintain over degraded forest land double in extent by the State Forest Department at the project cost.
5. Demarcation of the area will be done on ground at project cost using four feet high RCC pillars with serial numbers, forward and back bearings and distance from pillar to pillar.
6. Trees shall be felled only when it becomes necessary and under strict supervision of State Forest Department.
7. As per the plan approved by PCCF, Bangalore, small sized tree species (preferably medicinal plants) shall be planted below the transmission line and maintained at the project cost by the State Forest Department.
8. The maximum width of right of way for the transmission line on forest land shall be allowed to 35 metre.
9. The user agency shall ensure the minimum felling and the maximum height of the towers in the forest area. Felling shall be done under supervision of the Divisional Forest Officer.
10. Below each conductor, width clearance of 3 meters would be permitted for taking the tension stringing equipment. After stringing work is completed, the natural regeneration will be allowed to come up. Felling/pollarding/pruning of trees will be done with the permission and under the supervision of the Divisional Forest Officer whenever necessary to maintain the electrical clearance. One outer strip shall be left clear to permit maintenance of the transmission line.

11. In the remaining width of the right of way, trees will be felled or lopped to the extent required, for preventing electrical hazards by maintaining the minimum clearance of 4.6 meters between conductors and trees. The sag and swing of the conductors are to be kept in view while working out the minimum clearance mentioned as above.
12. In case of transmission lines to be constructed in hilly areas where adequate clearance is already available, trees would not be cut, pruned or damaged.
13. No labour camps shall be established on the forest land.
14. Sufficient firewood shall be provided by the Usger Agency to the labourers at project cost after purchase from the State Forest Department/Forest Development Corporation.
15. The user agency shall ensure that there should be no damage to the available wildlife.
16. The amount received from the user agency as N.P.V. and Compensatory afforestation funds shall be deposited as per the G.O. FEE 247 FGL 2002, dated: 17.1.2004.
17. The approval under the Forest(Conservation)Act, 1980 is subject to the clearance under the Environment(Protection)Act, 1986, if required.
18. The forest land shall not be used for any purpose other than that specified in the proposal.
19. The user agency has to pay the Net present value (NPV) fixed by Government vide Notification No. FEE 247 FGL 2002, dated: 17.1.2004.
20. The Executive Engineer (Elec), Karnataka Electricity Board, Hubli shall deposit funds for raising compensatory plantation at the rate of Rs. 40,700/- per ha.
21. The land shall revert back to the Forest Department if the same is not required for the purpose for which it is diverted.
22. Karnataka Electricity Board shall pay the lease rent as fixed by the Government.
23. Any other condition that the State Government or the Chief Conservator of Forests(Central), Regional Office, Bangalore may impose from time to in the interest of conservation, protection or development of forests.

By Order and in the name of the Governor of Karnataka,

PR-263

**S.R.VATSALA,**

Under Secretary to Government,

Forest,Ecology and Environment Department.

**ಶಿಕ್ಷಣ ಸಚಿವಾಲಯ**

**ವಿಷಯ:** ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ಅನ್ವಯಿಸುವ ಪುಸ್ತಕ ಆಯ್ಕೆ ಮತ್ತು ಖರೀದಿಗೆ ಸಂಬಂಧಿಸಿದ ಪರಿಷ್ಕರಿಸಿದ ಮಾರ್ಗಸೂಚಿಗಳು.

**ಓದಲಾಗಿದೆ:**
1) ದಿನಾಂಕ 26–9–1997ರ ಸರ್ಕಾರಿ ಅದೇಶ ಸಂಖ್ಯೆ: ಇಡಿ 3 ಎಲ್‌ಬಿಪಿ 94.
2) ದಿನಾಂಕ 15–10–2000ರ ಸರ್ಕಾರಿ ಅದೇಶ ಸಂಖ್ಯೆ: ಇಡಿ 4 ಎಲ್‌ಬಿಪಿ 99.
3) ದಿನಾಂಕ 4–11–2002ರ ಸರ್ಕಾರಿ ಸುತ್ತೋಲೆ ಸಂಖ್ಯೆ: ಇಡಿ 118 ಎಲ್‌ಐಬಿ 2002.
4) ದಿನಾಂಕ 12–2–2004ರ ಸರ್ಕಾರಿ ಸುತ್ತೋಲೆ ಸಂಖ್ಯೆ: ಇಡಿ 12 ಎಲ್‌ಬಿಪಿ 2003.
5) ದಿನಾಂಕ 21–2–2004ರ ಸರ್ಕಾರಿ ಅದೇಶ ಸಂಖ್ಯೆ: ಇಡಿ 1 ಎಲ್‌ಬಿಪಿ 2004.

**ಪ್ರಸ್ತಾವನೆ:**

ಮೇಲೆ (1)ರಿಂದ (5)ರವರೆಗೆ ಓದಲಾದ ಸರ್ಕಾರಿ ಅದೇಶ ಹಾಗೂ ಸುತ್ತೋಲೆಗಳನ್ವಯ ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ಅನ್ವಯಿಸುವ ಪುಸ್ತಕ ಆಯ್ಕೆ ಮತ್ತು ಖರೀದಿಯ ಕಾರ್ಯವಿಧಾನವನ್ನು ನಿಗದಿಪಡಿಸಲಾಗಿದೆ.

2) ಸಾರ್ವಜನಿಕ ಗ್ರಂಥಾಲಯ ಇಲಾಖೆಯ ಗ್ರಂಥಾಲಯಗಳಲ್ಲಿ ಉತ್ತಮ ಮೌಲ್ಯದ ಗ್ರಂಥಗಳನ್ನು ಸಂಗ್ರಹಿಸಿಡುವ ಹಾಗೂ ಸಾರ್ವಜನಿಕ ಓದುಗರ ಅಭಿರುಚಿಗೆ ಅನುಸಾರವಾಗಿ ಗ್ರಂಥಗಳನ್ನು ಒದಗಿಸುವ ದೃಷ್ಟಿಯಿಂದ ಸದರಿ ಪುಸ್ತಕ ಆಯ್ಕೆ ಮತ್ತು ಖರೀದಿ ಕಾರ್ಯ ವಿಧಾನವನ್ನು ಸರ್ಕಾರ ಪುನರ್ ಅವಲೋಕಿಸಿ, ಅದನ್ನು ಪರಿಷ್ಕರಿಸುವುದು ಅಗತ್ಯವೆಂದು ಭಾವಿಸಿದೆ. ಅದರಂತೆ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 1 ಎಲ್‌ಬಿಪಿ 2004, ಬೆಂಗಳೂರು, ದಿನಾಂಕ: 07ನೇ ಫೆಬ್ರವರಿ 2005**

3) ಮೇಲೆ ವಿವರಿಸಿದ ಹಿನ್ನಲೆಯಲ್ಲಿ, ಮೇಲೆ (1)ರಿಂದ (5)ರಲ್ಲಿ ಓದಲಾದ ಸರ್ಕಾರದ ಆದೇಶ ಮತ್ತು ಸುತ್ತೋಲೆಗಳನ್ನು ರದ್ದುಪಡಿಸುತ್ತಾ, ಈ ಆದೇಶಕ್ಕೆ ಲಗತ್ತಿಸಿದ ಅನುಬಂಧ–1, ಅನುಬಂಧ–2 ಹಾಗೂ ಅನುಬಂಧ–3ರಲ್ಲಿ ಒಳಗೊಂಡಂತೆ ಪರಿಷ್ಕರಿಸಿದ ಪ್ರಸ್ತುತ ಆಯ್ಕೆ ಮತ್ತು ಖರೀದಿ ಪ್ರಕ್ರಿಯೆಗೆ ಸಂಬಂಧಿಸಿದಂತೆ ಮಾರ್ಗಸೂಚಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಈ ಮೂಲಕ ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್.ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

ಅನುಬಂಧ–1

**(ದಿನಾಂಕ:07–02–2005ರ ಆದೇಶ ಸಂಖ್ಯೆ: ಇಡಿ 1 ಎಲ್‌ಬಿಪಿ 2004)**

**ಪುಸ್ತಕ ಆಯ್ಕೆಯ ಕಾರ್ಯ ವಿಧಾನ:**

1) ಪುಸ್ತಕ ಆಯ್ಕೆಗೆ ಸಂಬಂಧಿಸಿದ ಈ ಕಾರ್ಯವಿಧಾನ ಎಲ್ಲಾ ಭಾಷೆಯ ಪುಸ್ತಕಗಳ ಆಯ್ಕೆಗಾಗಿ ಅನ್ವಯಿಸತಕ್ಕದ್ದು.

2) ಸಾರ್ವಜನಿಕ ಗ್ರಂಥಾಲಯಗಳಿಗಾಗಿ ಪುಸ್ತಕಗಳನ್ನು ಆಯ್ಕೆ ಮಾಡಲು ರಾಜ್ಯ ಮಟ್ಟದಲ್ಲಿ ಪುಸ್ತಕ ಆಯ್ಕೆ ಸಮಿತಿ ಇರತಕ್ಕದ್ದು. ಆ ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರುಗಳನ್ನು ರಾಜ್ಯ ಸರ್ಕಾರವು ಪ್ರತ್ಯೇಕ ಆದೇಶದ ಮೂಲಕ ನಾಮನಿರ್ದೇಶಿಸತಕ್ಕದ್ದು. ಈ ಸಮಿತಿಗೆ ಸಂಬಂಧಿಸಿದ ವಿವರಗಳನ್ನು, ಅಂದರೆ, ಅದರ ಸ್ವರೂಪ, ಕಾರ್ಯವ್ಯಾಪ್ತಿ, ಕಾಲಾವಧಿ, ಕಾರ್ಯಚಟುವಟಿಕೆ, ಇತ್ಯಾದಿಗಳನ್ನು ಅನುಬಂಧ–2ರಲ್ಲಿ ನೀಡಲಾಗಿದೆ.

3) ಪುಸ್ತಕಗಳನ್ನು ಆಯ್ಕೆ ಮಾಡುವ ಬಗ್ಗೆ ವರ್ಷಕ್ಕೆ ಕನಿಷ್ಠ ಮೂರು ಬಾರಿಯಾದರೂ ರಾಜ್ಯದ ಎಲ್ಲಾ ಪ್ರಮುಖ ಕನ್ನಡ ಮತ್ತು ಆಂಗ್ಲ ಭಾಷೆಯ ದಿನ ಪತ್ರಿಕೆಗಳೂ ಒಳಗೊಂಡಂತೆ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟಣೆ/ಜಾಹಿರಾತು ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಇವರು ನೀಡಿ, ಆ ವರ್ಷದ ನಿರಂತರ ಆಯ್ಕೆ ವಿಷಯವು ಸಾರ್ವಜನಿಕರ ಗಮನಕ್ಕೆ ಬರುವಂತೆ ಮಾಡತಕ್ಕದ್ದು.

4) ಆಯ್ಕೆಗಾಗಿ ಪುಸ್ತಕಗಳನ್ನು ಸಲ್ಲಿಸುವ ಪ್ರಕಾಶಕರು/ಪುಸ್ತಕ ಮಾರಾಟಗಾರರು /ಸಂಘ ಸಂಸ್ಥೆಗಳು ಷಾಪ್ ಅಂಡ್ ಎಸ್ಟಾಬ್ಲಿಷ್‌ಮೆಂಟ್ ಕಾನೂನಿನ ಅಡಿಯಲ್ಲಿ ನೋಂದಾಯಿಸಿರಬೇಕು. ಅದಕ್ಕೆ ಸಂಬಂಧಿಸಿದ ನೋಂದಣಿ ಪತ್ರದ ಪ್ರತಿಯನ್ನು (ಕಾಲಕಾಲಕ್ಕೆ ನವೀಕರಿಸಿದ) ಅರ್ಜಿಯೊಡನೆ ಲಗತ್ತಿಸತಕ್ಕದ್ದು. ಈ ನಿಬಂಧನೆ ಲೇಖಕ–ಪ್ರಕಾಶಕರಿಗೆ ಅನ್ವಯಿಸುವುದಿಲ್ಲ.

5) ಪುಸ್ತಕಗಳನ್ನು ಆಯ್ಕೆಗಾಗಿ ಸಲ್ಲಿಸುವ ಮಾರಾಟ ಅಥವಾ ಪ್ರಕಾಶನ ಸಂಸ್ಥೆ ಸಂದರ್ಭಾನುಸಾರ ರಾಜ್ಯ/ಕೇಂದ್ರ ತೆರಿಗೆ ಇಲಾಖೆಯಿಂದ ನೊಂದಾಯಿತ ಸಂಸ್ಥೆಯಾಗಿರಬೇಕು. ಈ ನಿಬಂಧನೆ ಲೇಖಕಪ್ರಕಾಶಕರಿಗೆ ಅನ್ವಯಿಸುವುದಿಲ್ಲ.

6) ಮಂಜೂರಾದ ಆಯವ್ಯಯದಲ್ಲಿ ಪುಸ್ತಕ ಖರೀದಿಗಾಗಿ ನಿಗದಿಪಡಿಸಿದ ಮೊತ್ತದಲ್ಲಿ ಕನ್ನಡ ಪುಸ್ತಕಗಳಿಗೆ ಶೇ.80 ಹಾಗೂ ಇಂಗ್ಲೀಷ್ ಮತ್ತು ಭಾರತೀಯ ಇತರ ಭಾಷೆಗಳ ಪುಸ್ತಕಗಳಿಗೆ ಶೇ.20ರಷ್ಟು ಹಣವನ್ನು ಖರೀದಿಸಲು ಅನುಕೂಲವಾಗುವಂತೆ ಪುಸ್ತಕಗಳ ಆಯ್ಕೆಯನ್ನು ಮಾಡುವುದು.

7) ಆಯ್ಕೆಗೆ ಸಲ್ಲಿಸುವ ಎಲ್ಲಾ ಭಾಷೆಗಳ ಪುಸ್ತಕಗಳ ಶೀರ್ಷಿಕೆಯು ವರ್ಷದಲ್ಲಿ ಪ್ರಥಮ ಮುದ್ರಣಗೊಂಡು, ಪ್ರಥಮ ಆವೃತ್ತಿಯಾಗಿ ಪ್ರಕಟಿತವಾಗಿರತಕ್ಕದ್ದು. ಆದರೆ, ಪರಿಷ್ಕೃತಗೊಂಡ ಆವೃತಿಯ ಗ್ರಂಥಗಳನ್ನು (revised editions) ಆಯ್ಕೆಗೆ ಪರಿಗಣಿಸಬಹುದು.

8) ಪುಸ್ತಕ ಆಯ್ಕೆಗಾಗಿ ಪುಸ್ತಕಗಳನ್ನು ಸಲ್ಲಿಸುವ ಸಂದರ್ಭದಲ್ಲಿ ಕರ್ನಾಟಕ ಮುದ್ರಣ ಮತ್ತು ನೊಂದಣಿ ಕಾನೂನು ಕಾಪಿರೈಟ್ ಕಾಯ್ದೆ ಮೇರೆಗೆ ಬೆಂಗಳೂರಿನ ರಾಜ್ಯ ಕೇಂದ್ರ ಗ್ರಂಥಾಲಯದ ಕಾಪಿ ರೈಟ್ ವಿಭಾಗದಲ್ಲಿ ಮೂರು ಪ್ರತಿಗಳನ್ನು ಉಚಿತವಾಗಿ ಸಲ್ಲಿಸಿ ನೊಂದಾಯಿಸತಕ್ಕದ್ದು. ಅಲ್ಲದೆ, ನೊಂದಣಿ ಪ್ರಮಾಣ ಪತ್ರದ ನಕಲು ಪ್ರತಿಯನ್ನು ಕಡ್ಡಾಯವಾಗಿ ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

9) ಪ್ರಥಮ ಮುದ್ರಣಗೊಂಡ ವರ್ಷದಿಂದ ಕನಿಷ್ಟ 10 ವರ್ಷಗಳ ಅವಧಿಯ ನಂತರ ಮರುಮುದ್ರಣಗೊಳ್ಳುವ ಉತ್ತಮ ಪುಸ್ತಕಗಳನ್ನು ಆಯ್ಕೆಗಾಗಿ ಪರಿಗಣಿಸಬಹುದು.

10) ಮೂವತ್ತು ಪುಟಗಳಿಗಿಂತ ಕಡಿಮೆ ಇರುವ ಯಾವ ಭಾಷೆಗಳ ಪುಸ್ತಕಗಳನ್ನು (ಮಕ್ಕಳ ಹಾಗೂ ನವಸಾಕ್ಷರ ಪುಸ್ತಕಗಳನ್ನು ಹೊರತುಪಡಿಸಿ) ಆಯ್ಕೆ ಮಾಡಬಾರದು.

11) ಗ್ರಾಮ ಪಂಚಾಯಿತಿ ಗ್ರಂಥಾಲಯಗಳಿಗೆ ಶೇಕಡ 90ರಷ್ಟು ಕನ್ನಡ ಪುಸ್ತಕಗಳನ್ನೇ ಆಯ್ಕೆ ಮಾಡಬೇಕು.

12) ಲೇಖಕರೇ ಪ್ರಕಾಶಕರಾಗಿರುವ ಸಂದರ್ಭದಲ್ಲಿ ಲೇಖಕರೇ ಅರ್ಜಿ ಸಲ್ಲಿಸಬೇಕು.

13) ಪುಸ್ತಕಗಳನ್ನು ಪ್ರಕಟಿಸುವ ಮೂಲ ಪ್ರಕಾಶಕರು ಅಥವಾ ಅವರ ಅನುಮತಿಯನ್ನು ಅಧಿಕೃತವಾಗಿ ಪಡೆದ ಪುಸ್ತಕ ವ್ಯಾಪಾರಿಗಳು ಮಾತ್ರ ಅರ್ಜಿ ಸಲ್ಲಿಸಬೇಕು.

14) ಮುದ್ರಣಕ್ಕೆ ಉತ್ತಮ ಕಾಗದ ಬಳಸಿರಬೇಕು. ನ್ಯೂಸ್‌ಪ್ರಿಂಟ್ ಅಥವಾ ಇತರೆ ಅಗ್ಗದ ಕಾಗದದಲ್ಲಿ ಮುದ್ರಿಸಿರುವ ಪುಸ್ತಕಗಳನ್ನು ಪರಿಗಣಿಸಕೂಡದು.

15) ಪುಸ್ತಕದ ಒಳ ಎರಡನೇ ಪುಟದಲ್ಲಿ (ಶೀರ್ಷಿಕೆ ಪುಟದ ಹಿಂಬದಿಯಲ್ಲಿ) ಕಡ್ಡಾಯವಾಗಿ ಗ್ರಂಥದ ಶೀರ್ಷಿಕೆ, ಲೇಖಕರ ಹೆಸರು, ಪ್ರಕಾಶಕರ ಹೆಸರು, ಒಟ್ಟು ಪುಟಗಳ (ಮುಖಪುಟಗಳೂ ಸೇರಿದಂತೆ) ಸಂಖ್ಯೆ, ಪ್ರಕಟಣೆಯ ವರ್ಷ, ಮಾರಾಟ ಬೆಲೆ ಹಾಗೂ ಮರು ಮುದ್ರಣದ (ಮರು ಮುದ್ರಣ ಆಗಿದ್ದರೆ) ವಿವರಗಳನ್ನು ಮುದ್ರಿಸಿರಬೇಕು. ಪುಸ್ತಕದ ಮೇಲೆ ಬೆಲೆಗಳು ಮುದ್ರಿತವಾಗಿದ್ದು, ಎದ್ದು ಕಾಣುವಂತಿರಬೇಕು. ಸೀಸದ ಕಡ್ಡಿಯಿಂದ ಬರೆಯಲಾದ, ರಬ್ಬರ್ ಸ್ಟಾಂಪ್‌ನಿಂದ ಮುದ್ರಿಸಲಾದ ಅಥವಾ ಬೇರೆಯಾಗಿ ಅಂಟಿಸಲಾದ ಬೆಲೆಗಳಿದ್ದಲ್ಲಿ ಅಂತಹ ಪುಸ್ತಕಗಳನ್ನು ಆಯ್ಕೆಮಾಡದೇ ತಿರಸ್ಕರಿಸಬೇಕು. ಆದರೆ ಅಂಥಹ ಪುಸ್ತಕಗಳನ್ನು ಆಯ್ಕೆಗಾಗಿ ಪರಿಗಣಿಸುವಾಗ ಅತ್ಯಂತ ಅಗತ್ಯವೆಂದು ಸಮಿತಿಗೆ ಕಂಡು ಬಂದಲ್ಲಿ ಸಮಿತಿಯು ಅದರ ಬೆಲೆಯನ್ನು ನಿಗದಿತ ಕಾರ್ಯ ವಿಧಾನದ ಪ್ರಕಾರ ನಿಗದಿ ಪಡಿಸತಕ್ಕದ್ದು. ಅಗತ್ಯವಿದ್ದಲ್ಲಿ, ಪ್ರಕಾಶಕರ ಮುದ್ರಿತ ಬೆಲೆ ಪಟ್ಟಿಯನ್ನು ಗಮನಿಸಿ ಬೆಲೆ ನಿಗದಿ ಪಡಿಸತಕ್ಕದ್ದು. ಅಲ್ಲದೆ, ಸಾರ್ವಜನಿಕ ಗ್ರಂಥಾಲಯ ಇಲಾಖೆಯ ಗ್ರಂಥಾಲಯಗಳನ್ನು ಹೊರತುಪಡಿಸಿ, ಶಾಲಾ ಕಾಲೇಜುಗಳು, ಸಾರ್ವಜನಿಕ ಸಂಸ್ಥೆಗಳು ಮುಂತಾದ ಬೇರೆ ಖರೀದಿದಾರರಿಗೂ ಸಹ ಮೊಹರಿನಿಂದ ನಮೂದಿಸಿದ ಅಥವಾ ಚೀಟಿ ಅಂಟಿಸುವ ಮೂಲಕ ನಮೂದಿಸಿದ ಪರಿಷ್ಕೃತ ದರಕ್ಕೆ ತಾವು ಈ ಪುಸ್ತಕಗಳನ್ನು ಮಾರಾಟ ಮಾಡುತ್ತಿಲ್ಲ ಎಂಬುದಾಗಿ ಲಿಖಿತವಾಗಿ ಹೇಳಿಕೆ ನೀಡತಕ್ಕದ್ದು. ಅಂತಹ ಹೇಳಿಕೆ ಏನಾದರೂ ವಾಸ್ತವವಲ್ಲದ ಅಥವಾ ತಪ್ಪಾಗಿರುವ ಹೇಳಿಕೆ ಎಂಬುದಾಗಿ ಕಂಡು ಬಂದಲ್ಲಿ ಅಂತಹ ಪುಸ್ತಕಗಳ ಖರೀದಿಗೆ ತನಗೆ ಸಂದಾಯವಾಗಿರುವ ಅಥವಾ ಸಂದಾಯವಾಗಬೇಕಾಗಿರುವ ಮೊತ್ತವನ್ನು ಮುಟ್ಟುಗೋಲು ಹಾಕಿಕೊಳತಕ್ಕದ್ದು. ಅಷ್ಟೇ ಅಲ್ಲದೆ, ಸರ್ಕಾರದ ಇಲಾಖೆಗಳಿಗೆ ಅಥವಾ ಸರ್ಕಾರದ ನಿಯಂತ್ರಣದಲ್ಲಿ ಬರುವ ಯಾವುದೇ ಸಂಸ್ಥೆಗೆ, ಸ್ವಾಯುತ್ತ ಸಂಸ್ಥೆಗೆ, ಶಿಕ್ಷಣ ಸಂಸ್ಥೆಗೆ ಮುಂತಾದುವುಗಳಿಗೆ ಪುಸ್ತಕ ಸರಬರಾಜು ಮಾಡುವ ವಿಷಯದಲ್ಲಿ ಕಪ್ಪು ಪಟ್ಟಿಗೆ ಸೇರಿಸಲ್ಪಡಲು ತಾನು ಬದ್ಧನು ಎಂಬ ಮುಚ್ಚಳಿಕೆಯನ್ನು ಪುಸ್ತಕಗಳ ಆಯ್ಕೆಗೆ ಸಲ್ಲಿಸುವಾಗ ಬರೆದುಕೊಡತಕ್ಕದ್ದು.

16) ಪುಸ್ತಕದ ಆಯ್ಕೆ ಹಾಗೂ ಅವುಗಳ ಬೆಲೆ ನಿಗದಿ ವಿಷಯದಲ್ಲಿ ಸಮಿತಿಯ ತೀರ್ಮಾನವೇ ಅಂತಿಮವಾಗಿರತಕ್ಕದ್ದು.

17) ಅಗತ್ಯ ಕಂಡು ಬಂದಲ್ಲಿ ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿಯು ರಾಜ್ಯದಲ್ಲಿ ನಡೆಯುವ ಪುಸ್ತಕ ಪ್ರದರ್ಶನಗಳಿಗೆ ಭೇಟಿ ನೀಡಿ ಪುಸ್ತಕಗಳನ್ನು ಆಯ್ಕೆ ಮಾಡಬಹುದು.

18) ರಾಜ್ಯ ಕೇಂದ್ರ ಗ್ರಂಥಾಲಯ ಹಾಗೂ ಇಂದಿರಾ ಪ್ರಿಯದರ್ಶಿನಿ ಮಕ್ಕಳ ಗ್ರಂಥಾಲಯ ಹಾಗೂ ಪೀಣ್ಯದಲ್ಲಿರುವ ತಾಂತ್ರಿಕ ಗ್ರಂಥಾಲಯಗಳು ಪರಾಮರ್ಶನ (reference) ಗ್ರಂಥಾಲಯಗಳು ಆಗಿರುವುದರಿಂದ, ಮೇಲೆ (ಕಂಡಿಕೆ 6ರಲ್ಲಿ) ಹೇಳಿದ ಶೇಕಡವಾರು ಅವುಗಳಿಗೆ ಅನ್ವಯಿಸುವುದಿಲ್ಲ.

19) ಗ್ರಂಥಗಳನ್ನು ಖರೀದಿಸಲು ಆಯ್ಕೆ ಮಾಡುವಾಗ ಗ್ರಂಥಗಳಲ್ಲಿ ಅಡಕವಾಗಿರುವ ವಿಷಯ ಕ್ರಮಬದ್ಧವಾಗಿದ್ದು, ಪುಟಗಳು, ರಟ್ಟು ಕಟ್ಟುವಿಕೆ ಹಾಗೂ ಗ್ರಂಥಗಳ ಇನ್ನಿತರ ಬಾಹ್ಯ ರಚನೆಯನ್ನು ಸಹ ಗಮನದಲ್ಲಿಟ್ಟುಕೊಳ್ಳಬೇಕು. ಯಾವುದೇ ಪುಸ್ತಕದ ಕ್ಯಾಲಿಕೋ ಪ್ರತಿಗಳು ಲಭ್ಯವಿಲ್ಲದಿದ್ದಲ್ಲಿ ಮಾತ್ರ ಸಾದಾ ಪ್ರತಿಗಳನ್ನು ಖರೀದಿಸತಕ್ಕದ್ದು.

20) ಜ್ಞಾನಪೀಠ, ಕೇಂದ್ರ ಸಾಹಿತ್ಯ ಅಕಾಡೆಮಿಗಳಿಂದ ಪ್ರಶಸ್ತಿ ಪಡೆದು ಭಾಷಾಂತರಗೊಂಡ ಗ್ರಂಥಗಳನ್ನು, ರಾಷ್ಟ್ರ ಮತ್ತು ರಾಜ್ಯ ಮಟ್ಟದಲ್ಲಿ ಕೇಂದ್ರ/ರಾಜ್ಯ ಸಾಹಿತ್ಯ ಅಕಾಡೆಮಿಗಳಿಂದ ಪ್ರಶಸ್ತಿಗಳಿಸಿದ ಪುಸ್ತಕಗಳು ಹಾಗೂ ನ್ಯಾಷನಲ್ ಬುಕ್ ಟ್ರಸ್ಟ್ ಮತ್ತು ಇತರ ಸರ್ಕಾರಿ ಸಂಸ್ಥೆಗಳು ಪ್ರಕಟಿಸಿರುವಂತಹ ಪುಸ್ತಕಗಳನ್ನು ಖರೀದಿಸಲು ಪ್ರಸ್ತುತ ಆಯ್ಕೆ ಪ್ರಕ್ರಿಯೆಗೆ ಒಳಪಡುವುದಿಲ್ಲ, ಹಾಗಾಗಿ ಅವುಗಳನ್ನು ರಾಜ್ಯ ಕೇಂದ್ರ ಗ್ರಂಥಾಲಯಕ್ಕೆ ಸಂಬಂಧಿಸಿದಂತೆ ನಿರ್ದೇಶಕರು ಮತ್ತು ಉಳಿದ ನಗರ/ಜಿಲ್ಲಾ ಗ್ರಂಥಾಲಯಗಳಿಗೆ ಸಂಬಂಧಿಸಿದಂತೆ, ಆಯಾಯ ಮುಖ್ಯ ಗ್ರಂಥಾಲಯಾಧಿಕಾರಿಗಳು ನೇರವಾಗಿ ಖರೀದಿಸಬಹುದು.

21) ಪಾರದರ್ಶಕತೆಯ ದೃಷ್ಟಿಯಿಂದ ಸಮಿತಿಯು ಯಾವುದೇ ಪುಸ್ತಕವನ್ನು ಆಯ್ಕೆ ಮಾಡದೇ ಇದ್ದಲ್ಲಿ ಅದಕ್ಕೆ ಕಾರಣವನ್ನು ದಾಖಲಿಸತಕ್ಕದ್ದು.

**ಅನುಬಂಧ–2**

**(ದಿನಾಂಕ:07–02–2005ರ ಆದೇಶ ಸಂಖ್ಯೆ: ಇಡಿ 1 ಎಲ್‌ಬಿಪಿ 2004)**

**ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿಯ ಸ್ವರೂಪ ಮತ್ತು ಕಾರ್ಯವ್ಯಾಪ್ತಿ**

(1) ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿಯು, ಅನುಬಂಧ–1ರಲ್ಲಿ ಒಳಗೊಂಡ ಕಾರ್ಯವಿಧಾನ ಹಾಗೂ ಷರತ್ತು ಮತ್ತು ನಿಬಂಧನೆಗಳನ್ನು ಪಾಲಿಸತಕ್ಕದ್ದು.

(2) ಸಮಿತಿಯ ವ್ಯಾಪ್ತಿ:

**ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿಯು ಈ ಕೆಳಕಂಡ ಪುಸ್ತಕಗಳನ್ನು ಆಯ್ಕೆ ಮಾಡತಕ್ಕದ್ದು:–**

ಅ) ರಾಜ್ಯ ಕೇಂದ್ರ ಗ್ರಂಥಾಲಯಕ್ಕೆ ಬೇಕಾಗುವ ಪುಸ್ತಕಗಳು.

ಆ) ಸಾರ್ವಜನಿಕ ಗ್ರಂಥಾಲಯ ಇಲಾಖೆಯಡಿ ಬರುವ ಜಿಲ್ಲಾ ಕೇಂದ್ರ ಗ್ರಂಥಾಲಯ ಹಾಗೂ ನಗರ ಕೇಂದ್ರ ಗ್ರಂಥಾಲಯಗಳಿಗಾಗಿ ಬೇಕಾಗುವ ಪುಸ್ತಕಗಳು.

ಇ) ರಾಜಾರಾಂ ಮೋಹನ್ ರಾಯ್ ಗ್ರಂಥಾಲಯ ಪ್ರತಿಷ್ಠಾನ (ಆರ್.ಆರ್.ಎಲ್.ಎಫ್) ಯೋಜನೆಯಡಿಯಲ್ಲಿ ಖರೀದಿಸುವ ಪುಸ್ತಕಗಳು.

ಈ) ಗ್ರಾಮ ಪಂಚಾಯ್ತಿ ಗ್ರಂಥಾಲಯಗಳಿಗೆ ಬೇಕಾಗುವ ಪುಸ್ತಕಗಳು.

**(3)** ಸಮಿತಿಯ ಸ್ವರೂಪ

1) ಅಧ್ಯಕ್ಷರು – ಶಿಕ್ಷಣ/ಸಾಹಿತ್ಯ ಕ್ಷೇತ್ರದ ಖ್ಯಾತ ವ್ಯಕ್ತಿಗಳು. (ಸರದಿಯ ಪ್ರಕಾರ ರಾಜ್ಯ ನಾಲ್ಕು ಕಂದಾಯ ವಿಭಾಗಗಳಿಂದ).
2) ಸದಸ್ಯರು – 5 – ರಾಜ್ಯದ 4 ಕಂದಾಯ ವಿಭಾಗಗಳಿಂದ ನಾಲ್ವರು ಹಾಗೂ ಬೆಂಗಳೂರು ನಗರದಿಂದ ಒಬ್ಬರು ಸೇರಿದಂತೆ ಆಯ್ದ ಪ್ರಖ್ಯಾತ ದಲಿತ ಸಾಹಿತಿಗಳು, ಯುವ ಲೇಖಕರು ಹಾಗೂ ಶಿಕ್ಷಣ ತಜ್ಞರು.
3) ಮಹಿಳಾ ಸದಸ್ಯರು – ಸಾಹಿತಿಗಳು/ಶಿಕ್ಷಣ ತಜ್ಞರು (ಇಬ್ಬರು) (ಒಬ್ಬರು ಮೈಸೂರು–ಬೆಂಗಳೂರು ವಿಭಾಗದಿಂದ, ಮತ್ತೊಬ್ಬರು ಬೆಳಗಾಂ–ಗುಲ್ಬರ್ಗಾ ವಿಭಾಗದಿಂದ)
4) ವಿಜ್ಞಾನ ಕ್ಷೇತ್ರದ ಒಬ್ಬ ತಜ್ಞರು (ಸರದಿಯ ಪ್ರಕಾರ ಕಂದಾಯ ವಿಭಾಗಗಳಿಂದ)
5) ಮಾನವಿಕ ಶಾಸ್ತ್ರದ ಒಬ್ಬ ತಜ್ಞರು (ಸರದಿಯ ಪ್ರಕಾರ ಕಂದಾಯ ವಿಭಾಗಗಳಿಂದ)
6) ಮಕ್ಕಳ ಸಾಹಿತ್ಯ ಕ್ಷೇತ್ರದ ಒಬ್ಬ ತಜ್ಞರು (ಸರದಿಯ ಪ್ರಕಾರ ಕಂದಾಯ ವಿಭಾಗಗಳಿಂದ)
7) ಗ್ರಂಥಾಲಯ ವಿಜ್ಞಾನದ ಒಬ್ಬ ತಜ್ಞರು (ಸರದಿಯ ಪ್ರಕಾರ ಕಂದಾಯ ವಿಭಾಗಗಳಿಂದ)
8) ಅಧ್ಯಕ್ಷರು, ಕನ್ನಡ ಪುಸ್ತಕ ಪ್ರಾಧಿಕಾರ ಅಥವಾ ಅವರಿಂದ ನಾಮನಿರ್ದೇಶನಗೊಂಡ ಪ್ರಾಧಿಕಾರದ ಒಬ್ಬ ಸದಸ್ಯರು.
9) ಪುಸ್ತಕ ಪ್ರಕಾಶಕರ/ಮಾರಾಟಗಾರರ ಸಂಘದ ಒಬ್ಬ ಪ್ರತಿನಿಧಿ (ಸರದಿಯ ಪ್ರಕಾರ ಕಂದಾಯ ವಿಭಾಗಗಳಿಂದ)
10) ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು ಅಥವಾ ಅವರಿಂದ ನಾಮನಿರ್ದೇಶಿತ ಒಬ್ಬ ಕಾರ್ಯದರ್ಶಿ/ವ್ಯಕ್ತಿ.
11) ರಾಜ್ಯದ ವಿಶ್ವವಿದ್ಯಾನಿಲಯಗಳ ಪ್ರಸರಾಂಗಗಳ ನಿರ್ದೇಶಕರು (ಸರದಿಯ ಪ್ರಕಾರ)
12) ಅಧ್ಯಕ್ಷರು, ಕರ್ನಾಟಕ ವಿಜ್ಞಾನ ಪರಿಷತ್ ಅಥವಾ ಅವರಿಂದ ನಾಮ ನಿರ್ದೇಶಿತ ಒಬ್ಬ ಕಾರ್ಯದರ್ಶಿ ಅಥವಾ ವ್ಯಕ್ತಿ.
13) ರಾಜ್ಯ ಗ್ರಂಥಾಲಯ ಪ್ರಾಧಿಕಾರದಿಂದ ನಾಮನಿರ್ದೇಶನಗೊಂಡ ಒಬ್ಬ ಸದಸ್ಯರು (ಸರದಿಯ ಪ್ರಕಾರ)
14) ಅಖಿಲ ಭಾರತ ಪ್ರಕಾಶಕರ ಸಂಘದ ಮಾನ್ಯತೆ ಪಡೆದ ಕರ್ನಾಟಕ ಪ್ರಕಾಶಕರ ಸಂಘದ ಒಬ್ಬ ಪ್ರತಿನಿಧಿ.
15) ಕನ್ನಡ ಮತ್ತು ಆಂಗ್ಲ ಭಾಷೆಯ ಪುಸ್ತಕಗಳನ್ನು ಹೊರತುಪಡಿಸಿ ಇತರೆ ಭಾರತೀಯ ಭಾಷೆಯ ಪುಸ್ತಕಗಳನ್ನು ಆಯ್ಕೆ ಮಾಡಲು ಆಯಾಯಾ ಭಾಷೆಯ ಭಾಷಾ/ವಿಷಯ ಪರಿಣಿತರನ್ನು ಕೋ–ಆಪ್ಟ್ ಮಾಡಿಕೊಳ್ಳುವುದು.
16) ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ – ಸದಸ್ಯ ಕಾರ್ಯದರ್ಶಿ

**(4) ಸಮಿತಿಯ ಕಾಲಾವಧಿ:**

ಸಮಿತಿಯನ್ನು ರಚಿಸಿ ಆದೇಶವನ್ನು ಹೊರಡಿಸಿದ ದಿನಾಂಕದಿಂದ 2 ವರ್ಷಗಳ ಅವಧಿಗೆ ಅಥವಾ ಮುಂದಿನ ಸಮಿತಿ ಅಸ್ತಿತ್ವಕ್ಕೆ ಬರುವವರೆಗೆ ಇವರೆಡರಲ್ಲಿ ಯಾವುದು ನಂತರವೋ ಅಲ್ಲಿಯವರೆಗೆ ಇರುತ್ತದೆ.

**(5) ಪುಸ್ತಕ ಬೆಲೆ ನಿಗದಿ ಸಮಿತಿ:**

(ಅ) ಆಯ್ಕೆಯಾದ ಪ್ರತಿಯೊಂದು ಪುಸ್ತಕವು ಬೆಲೆ ನಿಗದಿಪಡಿಸುವ ಉಪಸಮಿತಿಯ ಪರಿಶೀಲನೆಗೆ ಒಳಪಡುತ್ತದೆ.

(ಆ) ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿ ಅಧ್ಯಕ್ಷರೂ ಸೇರಿದಂತೆ, ಲೇಖಕರು, ಪ್ರಕಾಶಕರು ಹಾಗೂ ಮುದ್ರಣ ಇಲಾಖೆ ಪ್ರತಿನಿಧಿಗಳನ್ನು ಒಳಗೊಂಡಂತೆ ಸದರಿ ಉಪಸಮಿತಿಯನ್ನು ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿ ರಚಿಸಿಕೊಳ್ಳತಕ್ಕದ್ದು.

(ಇ) ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿಯ ಅಧ್ಯಕ್ಷರೇ ಈ ಉಪ ಸಮಿತಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸತಕ್ಕದ್ದು. ಗ್ರಂಥಾಲಯ ಇಲಾಖೆ ನಿರ್ದೇಶಕರು ಇದರ ಕಾರ್ಯದರ್ಶಿ ಆಗಿರತಕ್ಕದ್ದು. ಈ ಉಪ ಸಮಿತಿಗೆ ಸರ್ಕಾರಿ ಮುದ್ರಣಾಲಯದ ನಿರ್ದೇಶಕರನ್ನು ಅಥವಾ ಉಪ ನಿರ್ದೇಶಕರನ್ನು ತಾಂತ್ರಿಕ ಸಲಹೆಗಾರರನ್ನಾಗಿ ಅಹ್ವಾನಿಸ ತಕ್ಕದ್ದು. ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿಯ ಇಬ್ಬರು ಸದಸ್ಯರು ಈ ಉಪಸಮಿತಿಯ ಸದಸ್ಯರಾಗಿರತಕ್ಕದ್ದು. ಅದೇ ರೀತಿಯಲ್ಲಿ ವೈಜ್ಞಾನಿಕ, ವೈದ್ಯಕೀಯ, ಕಾನೂನು ಮಾನವ ಶಾಸ್ತ್ರಗಳು ಮುಂತಾದ ವಿಶಿಷ್ಟ ವಿಷಯಗಳ ಬಗ್ಗೆ ಪುಸ್ತಕಗಳನ್ನು ಆಯ್ಕೆ ಮಾಡುವಾಗ ಸಮಿತಿಯು ಆಯಾ ಕ್ಷೇತ್ರಗಳಲ್ಲಿ ಪರಿಣಿತರಾದವರೊಬ್ಬರನ್ನು ಕೋ–ಆಪ್ಟ್ ಮಾಡಿಕೊಳ್ಳತಕ್ಕದ್ದು.

(ಈ) ಸದರಿ ಉಪಸಮಿತಿಯು ಖರೀದಿ ಬೆಲೆಯನ್ನು ನಿಗದಿಪಡಿಸುವಾಗ, ಗ್ರಂಥದ ಸತ್ವ ಹಾಗೂ ಮೌಲಿಕತೆ ಜೊತೆಗೆ ಅದಕ್ಕೆ ಉಪಯೋಗಿಸುವ ಕಾಗದದ ಜಿ.ಎಸ್.ಎಂ. ಹಾಗೂ ಗುಣಮಟ್ಟ (ಸಾಮಾನ್ಯ ಕಾಗದ, ಮ್ಯಾಫ್‌ಲಿಥೋ ಕಾಗದ ಇತ್ಯಾದಿ), ಮುದ್ರಣದ ಗುಣಮಟ್ಟ ಹೊದಿಕೆಯ ಸ್ವರೂಪ (ಒಂದು ಬಣ್ಣ, ಎರಡು ಬಣ್ಣ ಇತ್ಯಾದಿ) ಮತ್ತು ಬಳಸಿದ ಕಾಗದ (ಲ್ಯಾಮಿನೇಷನ್ ಇತ್ಯಾದಿ), ಬೈಂಡಿಂಗ್ (ಪಿನ್ನಿಂಗ್ ಸಕ್ಷನ್ ಸ್ಟಿಚ್ಚಿಂಗ್ ಇತ್ಯಾದಿ) ಒಳಪುಟಗಳಲ್ಲಿ ಉಪಯೋಗಿಸಲಾದ ಚಿತ್ರಗಳು ಇತ್ಯಾದಿಗಳನ್ನು ಗಮನಿಸಬೇಕು.

(6) **ಬೆಲೆಯ ನಿಗಧಿ ಬಗ್ಗೆ ಮೇಲ್ಮನವಿ:** ಬೆಲೆ ನಿಗದಿಪಡಿಸುವ ಉಪಸಮಿತಿಯು ಬೆಲೆ ನಿಗದಿಯಿಂದ ಬಾಧಿತರಾದವರು ರಾಜ್ಯ ಮಟ್ಟದ ಸಮಿತಿಗೆ ಮೇಲ್ಮನವಿ ಸಲ್ಲಿಸಬಹುದು. ಅಂತಹ ಮೇಲ್ಮನವಿಯನ್ನು ಆಯ್ಕೆ ಪಟ್ಟಿ ಪ್ರಕಟವಾದ 15 ದಿನಗಳೊಳಗಾಗಿ ಸಲ್ಲಿಸತಕ್ಕದ್ದು. ಅದರ ಕುರಿತು ರಾಜ್ಯ ಮಟ್ಟದ ಸಮಿತಿಯ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ.

## ಅನುಬಂಧ–3

**(ದಿನಾಂಕ:07–02–2005ರ ಆದೇಶ ಸಂಖ್ಯೆ: ಇಡಿ 1 ಎಲ್‌ಬಿಪಿ 2004)**

**ಪುಸ್ತಕ ಖರೀದಿ ವಿಧಾನಗಳು**

1. ಪುಸ್ತಕ ಆಯ್ಕೆ ಸಮಿತಿ ಆಯ್ಕೆ ಮಾಡಿದ ಪುಸ್ತಕಗಳನ್ನು ಮಾತ್ರ ಖರೀದಿಸಬೇಕು. ಆಯ್ಕೆಯಾದ ಪುಸ್ತಕಗಳನ್ನು ಪಟ್ಟಿ ಬಿಡುಗಡೆ ಆದ ದಿನಾಂಕದಿಂದ ಎರಡು ವರ್ಷ ಮಾತ್ರ ಖರೀದಿಸಬಹುದು.
2. ಪುಸ್ತಕಗಳನ್ನು ಖರೀದಿಸುವಾಗ, ಆಯಾ ಜಿಲ್ಲಾ/ನಗರ/ಕೇಂದ್ರ ಗ್ರಂಥಾಲಯಗಳ ಆಯವ್ಯಯದಲ್ಲಿ ಪುಸ್ತಕ ಖರೀದಿಗೆ ಮಂಜೂರಾದ ಮೊತ್ತದಲ್ಲಿ ಕನ್ನಡ ಪುಸ್ತಕಗಳಿಗೆ ಶೇ.80, ಇಂಗ್ಲೀಷ್ ಮತ್ತು ಭಾರತೀಯ ಇತರ ಭಾಷಾ ಪುಸ್ತಕಗಳಿಗೆ ಶೇ.20ರಂತೆ ಖರೀದಿಸಲು ಬಳಸತಕ್ಕದ್ದು.
3. ಸಾರ್ವಜನಿಕ ಗ್ರಂಥಾಲಯ ಇಲಾಖೆಯಲ್ಲಿ ಈ ಕೆಳಕಂಡ ಮೂರು ಹಂತದಲ್ಲಿ ಪುಸ್ತಕ ಖರೀದಿ ಪ್ರಕ್ರಿಯೆಯನ್ನು ಕಾರ್ಯಗತಗೊಳಿಸತಕ್ಕದ್ದು:–

ಅ) ಆಯ್ಕೆ ಸಮಿತಿಯಿಂದ ಆಯ್ಕೆಯಾದ ಪುಸ್ತಕಗಳ ಪೈಕಿ ಯಾವ ಪುಸ್ತಕಗಳನ್ನು ಖರೀದಿಸಬೇಕೆಂಬ ಬಗ್ಗೆ ಹಣಕಾಸಿನ ಲಭ್ಯತೆಗೆ ಒಳಪಟ್ಟು, ತೀರ್ಮಾನಿಸಲು ಆಯಾ ಜಿಲ್ಲಾ/ನಗರ ಗ್ರಂಥಾಲಯ ಪ್ರಾಧಿಕಾರಗಳೇ ಅಂತಿಮ ಅಧಿಕಾರ ಹೊಂದಿರುತ್ತವೆ.

ಆ) ಇಲಾಖೆಯ, ಜಿಲ್ಲಾ ಹಾಗೂ ನಗರ ಕೇಂದ್ರ ಗ್ರಂಥಾಲಯಗಳ ಆಯವ್ಯಯದಲ್ಲಿ ಪುಸ್ತಕ ಖರೀದಿಗೆ ಮಂಜೂರಾದ ಮೊತ್ತದಲ್ಲಿ ಶೇ.80ರಷ್ಟು (ಎಂಭತ್ತು) ಮೊತ್ತವನ್ನು ಉನ್ನತ ಮಟ್ಟದ ಪುಸ್ತಕ ಆಯ್ಕೆ ಸಮಿತಿಯಿಂದ ಆಯ್ಕೆಯಾದ ಪುಸ್ತಕಗಳನ್ನು ಖರೀದಿಸಲು ಮೀಸಲಿಡತಕ್ಕದ್ದು.

ಇ) ಆಯಾ ಜಿಲ್ಲೆಯ ಸ್ಥಳೀಯ ಲೇಖಕರು, ಲೇಖಕ ಪ್ರಕಾಶಕರು ಮತ್ತು ಪ್ರಕಾಶಕರ ಪುಸ್ತಕಗಳನ್ನು ಮಾತ್ರ ಶೇ.10ರಷ್ಟು ಮೊತ್ತಕ್ಕೆ ಆಯಾ ಜಿಲ್ಲಾ/ನಗರ ಪ್ರಾಧಿಕಾರ ಆಯ್ಕೆಮಾಡಿ ಖರೀದಿಸಬಹುದು.

ಈ) ಗ್ರಂಥಾಲಯದ ಓದುಗರ ಬೇಡಿಕೆಯ ಪ್ರಕಾರ ಪುಸ್ತಕಗಳನ್ನು ಖರೀದಿಸಲು ಶೇ.10ರಷ್ಟನ್ನು ಆಯಾ ಜಿಲ್ಲಾ/ನಗರ ಮುಖ್ಯ ಗ್ರಂಥಾಲಯಾಧಿಕಾರಿಯವರ ವಿವೇಚನೆಯಡಿಯಲ್ಲಿ ಖರೀದಿಸಬಹುದು. ಯಾವುದೇ ಭಾಷೆಯ ಯಾವುದೇ ಪ್ರಕಾರದ ಪುಸ್ತಕಗಳನ್ನು ಈ ವಿವೇಚನಾ ಕೋಟಾದಲ್ಲಿ ಖರೀದಿಸಬಹುದು. ಆದರೆ, ಬೆಂಗಳೂರು ನಗರ ಗ್ರಂಥಾಲಯ ಪ್ರಾಧಿಕಾರದ ವ್ಯಾಪ್ತಿಯೊಳಗೆ ಬರುವ ಮುಖ್ಯ ಗ್ರಂಥಾಲಯಾಧಿಕಾರಿಗಳಿಗೆ ಸಂಬಂಧಿಸಿದಂತೆ, ಈ ವಿವೇಚನಾ ಕೋಟಾ ಕೇವಲ ಶೇ.5ಕ್ಕೆ ಸೀಮಿತಗೊಳಿಸಿ ನಿಗದಿಪಡಿಸಿದೆ ಮತ್ತು ನಗರ ಗ್ರಂಥಾಲಯ ಪ್ರಾಧಿಕಾರವು ಶೇಕಡ 15ರಷ್ಟು ಮೊತ್ತಕ್ಕೆ ಖರೀದಿಸುವ ಅಧಿಕಾರ ಹೊಂದಿರುತ್ತದೆ.

4. ಗ್ರಂಥಾಲಯಕ್ಕೆ ಬರುವ ಓದುಗರ ದೃಷ್ಟಿಯಿಂದ ಗ್ರಂಥಾಲಯದಲ್ಲಿ ಪುಸ್ತಕಗಳನ್ನು ಸಂಗ್ರಹಿಸುವಾಗ ಎಲ್ಲಾ ಪ್ರಕಾರಗಳು ಇರುವಂತೆ ಕ್ರಮ ಕೈಗೊಳ್ಳಲು ಈ ಕೆಳಕಂಡ ಶೇಕಡಾವಾರು ಪ್ರಮಾಣದಲ್ಲಿ ಖರೀದಿ ಮಾಡತಕ್ಕದ್ದು.

| | |
|---|---|
| 1. ಸಾಹಿತ್ಯ | ಶೇ. 40 |
| 2. ಮಕ್ಕಳ ಸಾಹಿತ್ಯ | ಶೇ. 10 |
| 3. ಕಲೆ (ಕ್ರೀಡಾ ಸಾಹಿತ್ಯ ಒಳಗೊಂಡಂತೆ) | ಶೇ. 10 |
| 4. ವಿಜ್ಞಾನ, ವೃತ್ತಿ ಶಿಕ್ಷಣ, ಕೌಶಲ್ಯಾಭಿವೃದ್ಧಿ, ಆದಾಯ ಉತ್ಪಾದನಾ ಯೋಜನೆ | ಶೇ. 10 |
| 5. ಸ್ಪರ್ಧಾತ್ಮಕ | ಶೇ. 10 |
| 6. ಪಠ್ಯ ಪುಸ್ತಕ | ಶೇ. 10 |
| 7. ಸಾಂದರ್ಭಿಕ ಮತ್ತು ಪರಾಮರ್ಶನ | ಶೇ. 10 |

ಆದರೆ, ಒಂದೊಮ್ಮೆ ಯಾವುದೇ ಪ್ರಕಾರದ ಗ್ರಂಥಗಳು ಸದರಿ ಶೇಕಡಾವಾರಿನ ಪ್ರಕಾರ ಲಭ್ಯವಿಲ್ಲದಿದ್ದಲ್ಲಿ ಹಾಗೂ ಖರೀದಿ ನಂತರ ಹಣ ಉಳಿದಲ್ಲಿ, ಅವಶ್ಯಕತೆ ಇರುವ ಇತರೇ ಪ್ರಕಾರದ ಪುಸ್ತಕಗಳನ್ನು ಖರೀದಿಸಲು ವಿನಿಯೋಗಿಸಬಹುದು.

5. ಜಿಲ್ಲಾ/ನಗರ ಕೇಂದ್ರ ಗ್ರಂಥಾಲಯಗಳಿಗೆ ಯಾವುದೇ ಭಾಷೆಯ ಪುಸ್ತಕಗಳನ್ನು (ವಿದೇಶಿ ಪುಸ್ತಕಗಳೂ ಸೇರಿದಂತೆ) ಖರೀದಿಸುವಾಗ ಕನಿಷ್ಠ ಶೇ.15 ರಂತೆ ಸೋಡಿಯನ್ನು (ಡಿಸ್ಕೌಂಟ್) ಆಯ್ಕೆ ಸಮಿತಿ ನಿರ್ಣಯಿಸಿದ ನಿವ್ವಳ ಬೆಲೆಯ ಮೇಲೆ ಪಡೆಯತಕ್ಕದ್ದು. ಶೇ.15ಕ್ಕಿಂತ ಹೆಚ್ಚಿನ ಸೋಡಿಯನ್ನು ನೀಡಲು ಮುಂದೆ ಬಂದಲ್ಲಿ, ಒಪ್ಪಬಹುದು.
6. ಹೊರದೇಶದ ಪುಸ್ತಕಗಳನ್ನು ಖರೀದಿಸುವಾಗ ಚಾಲ್ತಿಯಲ್ಲಿರುವ ಗುಡ್ ಆಫೀಸ್ ಕಮಿಟಿಯಿಂದ ವಿದೇಶಿ ಕರೆನ್ಸಿ ವಿನಿಮಯದ ದರದ ಬಗ್ಗೆ ಕಾಲಕಾಲಕ್ಕೆ ಜಾರಿಯಾಗುವ ಪರಿಷ್ಕೃತ ದರಪಟ್ಟಿಯ ಅಧಿಕೃತ ಪಟ್ಟಿಯನ್ನು ಸರಬರಾಜುದಾರರಿಂದ ಪಡೆಯಬೇಕು, ಗುಡ್ ಆಫೀಸ್ ಕಮಿಟಿಯವರು ನಿಗದಿಪಡಿಸಿದ ದರವನ್ನೇ ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ಅನ್ವಯಿಸತಕ್ಕದ್ದು.
7. ಒಂದೇ ಶೀರ್ಷಿಕೆಯನ್ನು ಪುನ: ಖರೀದಿಸಬಾರದು. ಆದರೆ ಹೆಚ್ಚು ಪ್ರತಿಗಳ ಅವಶ್ಯಕತೆಯಿದ್ದಲ್ಲಿ, ಓದುಗರ ಬೇಡಿಕೆಯನ್ನು ಗಣನೆಗೆ ತೆಗೆದುಕೊಂಡು, ಆಯ್ಕೆ ಸಮಿತಿಯ ಒಪ್ಪಿಗೆ ಪಡೆದು ಖರೀದಿಸಬಹುದು.
   ಅ) ಸರಬರಾಜು ಆದೇಶವನ್ನು ಸಾಧ್ಯವಾದಷ್ಟು ಮಟ್ಟಿಗೆ ಲೇಖಕ, ಲೇಖಕ–ಪ್ರಕಾಶಕರಿಗೆ ನೀಡಬೇಕು.
8. ಯಾವುದೇ ಸಂಸ್ಥೆ/ಲೇಖಕ–ಪ್ರಕಾಶಕ/ಪ್ರಕಾಶಕರಿಂದ ಒಂದು ಆರ್ಥಿಕ ವರ್ಷದಲ್ಲಿ ಒಟ್ಟು ಐವತ್ತು ಸಾವಿರ ರೂಪಾಯಿಗಳು (ರೂ.50,000–00) ಬೆಲೆಗಿಂತ ಹೆಚ್ಚು ಬೆಲೆಯ ಪುಸ್ತಕಗಳನ್ನು ಖರೀದಿಸಬಾರದು (ಸದರಿ ಮೊತ್ತದಲ್ಲಿ ಸೋಡಿಯ ಮೊತ್ತ ಸೇರಿರುವುದಿಲ್ಲ).
9. (ಅ) ಗ್ರಂಥಗಳ ಗುಣಮೌಲ್ಯ, ಬೇಡಿಕೆ, ಉಪಯುಕ್ತತೆ ಮತ್ತು ಬೆಲೆಗಳನ್ನು ಗಮನದಲ್ಲಿಟ್ಟುಕೊಂಡು ಜಿಲ್ಲಾ/ನಗರ/ಸಂಚಾರಿ ಗ್ರಂಥಾಲಯಗಳಿಗೆ ಒಂದರಿಂದ ಮೂರು ಹಾಗೂ ಗ್ರಾಮ ಪಂಚಾಯತ್ ಗ್ರಂಥಾಲಯಕ್ಕೆ ಒಂದು ಪ್ರತಿಯಂತೆ ಖರೀದಿಸತಕ್ಕದ್ದು.
   (ಆ) ಇಲಾಖೆಯ ಗ್ರಂಥಾಲಯಗಳ ಸರ್ವತೋಮುಖ ಅಭಿವೃದ್ಧಿ ದೃಷ್ಟಿಯಿಂದ ಆರ್ಥಿಕವಾಗಿ ದುರ್ಬಲವಾದ ಜಿಲ್ಲಾ/ನಗರ ಕೇಂದ್ರ ಗ್ರಂಥಾಲಯಗಳಿಗಾಗಿ ಪುಸ್ತಕಗಳನ್ನು ದಾನರೂಪದಲ್ಲಿ ನೀಡಲು ಅನುವುಮಾಡಿಕೊಳ್ಳುವ ದೃಷ್ಟಿಯಿಂದ ಬೆಂಗಳೂರು ನಗರ ಕೇಂದ್ರ ಗ್ರಂಥಾಲಯದ ಐದು ವಲಯಗಳಲ್ಲಿ ತಲಾ ಒಂದು ಶೀರ್ಷಿಕೆಯ 1 ರಿಂದ 6 ಪ್ರತಿಗಳನ್ನು ಖರೀದಿಸಿ ಅಂತಹ ದುರ್ಬಲವಾದ ಗ್ರಂಥಾಲಯಗಳಿಗೆ ನಿರ್ದೇಶಕರ ಪೂರ್ವಾನುಮತಿಯೊಂದಿಗೆ ವಿತರಿಸುವುದು.
10. ಹೊಸದಾಗಿ ಪ್ರಾರಂಭವಾಗುವ ಗ್ರಂಥಾಲಯಗಳಿಗೆ, ಪ್ರಾರಂಭಿಕ ವರ್ಷದಲ್ಲಿ ಮಾತ್ರ ಸಾಂದರ್ಭಿಕ ಗ್ರಂಥಗಳು ಅಂದರೆ, ಪದಕೋಶ, ವಿಶ್ವಕೋಶ, ವಾರ್ಷಿಕ ಪುಸ್ತಕಗಳು ಹಾಗೂ ಇತರ ಶೈಕ್ಷಣಿಕ ಅಗತ್ಯಕ್ಕೆ ತಕ್ಕಂತೆ ಇರುವ ಪುಸ್ತಕಗಳು, ಮಹಾನ್ ವ್ಯಕ್ತಿಗಳ ಜೀವನ ಚರಿತ್ರೆ ಹಾಗೂ ಉತ್ತಮ ಮೌಲ್ಯಗಳುಳ್ಳ ಗ್ರಂಥಗಳ ಮಹಾನ್ ಲೇಖಕರ ಪುಸ್ತಕಗಳು ಮರು ಮುದ್ರಣ ಸೇರಿದಂತೆ ಆಯಾಯಾ ವರ್ಷದಲ್ಲಿ ಪ್ರಕಟಗೊಂಡಿರಬೇಕೆಂಬ ಷರತ್ತು ಇಲ್ಲದೆ ಗ್ರಂಥಗಳನ್ನು ಖರೀದಿಸಬಹುದು. ಹಾಗೂ ಸದರಿ ಪುಸ್ತಕ ಆಯ್ಕೆಗಾಗಿ ಆಯಾಯಾ ಜಿಲ್ಲಾ/ನಗರ ಗ್ರಂಥಾಲಯ ಪ್ರಾಧಿಕಾರದ ಅನುಮೋದನೆಯನ್ನು ಪಡೆಯುವುದು.
11. (ಅ) ಪುಸ್ತಕಗಳ ಪ್ಯಾಕಿಂಗ್ ಹಾಗೂ ರವಾನಿಸುವ ಪುಸ್ತಕಗಳ ಸಾಗಾಣಿಕಾ ವೆಚ್ಚ ಮತ್ತು ಡ್ಯಾಮರೇಜ್ ಇದ್ದಲ್ಲಿ, ಪುಸ್ತಕ ಸರಬರಾಜುದಾರರು ಭರಿಸಬೇಕು.
    (ಆ) ಎಲ್ಲಾ ಪುಸ್ತಕಗಳ ಖರೀದಿಯನ್ನು ಈ ಅದೇಶದನ್ವಯ ನಿಗದಿಪಡಿಸಿದ ಕಾರ್ಯ ವಿಧಾನವನ್ನು ಪಾಲಿಸಿ ಮಾಡತಕ್ಕದ್ದು. ಅದರ ಉಲ್ಲಂಘನೆ ಮಾಡುವ ಅಧಿಕಾರಿಗಳ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳಲಾಗುವುದು.
    (ಇ) ಹೆಚ್ಚು ಬೇಡಿಕೆ ಇರುವ ಪುಸ್ತಕಗಳ ಅಗತ್ಯದಷ್ಟು ಸಂಖ್ಯೆಯ ಪ್ರತಿಗಳನ್ನು ಮಾತ್ರ ಕೊಂಡುಕೊಂಡು, ಅವುಗಳನ್ನು ಅನುಪಯುಕ್ತವಾಗಿ ಹಾಳು ಮಾಡುವುದು ಕಂಡು ಬಂದಲ್ಲಿ, ಸಂಬಂಧಪಟ್ಟ ಮುಖ್ಯ ಗ್ರಂಥಾಲಯಾಧಿಕಾರಿಗಳ ಮೇಲೆ ಶಿಸ್ತಿನ ಕ್ರಮ ಕೈಗೊಳ್ಳತಕ್ಕದ್ದು.
    (ಈ) ಯಾವ ಓದುಗರಿಂದಲೂ ಉಪಯೋಗಿಸಲ್ಪಡದ ಕಪಾಟಿನಲ್ಲಿಯೇ ಹೆಚ್ಚಿಗೆ ಇರುವ ಗ್ರಂಥಗಳ ಹಾಗೂ ಹರಿದುಹೋಗಿರುವ ಗ್ರಂಥಗಳ ವಿವರಣಾತ್ಮಕ ಪಟ್ಟಿಯನ್ನು ತಯಾರಿಸಿ, ಕೈಗೊಳ್ಳಬೇಕಾಗಿರುವ ಕ್ರಮವನ್ನು ಸೂಚಿಸಿ, ನಿರ್ದೇಶಕರ ಕಛೇರಿಗೆ ವರದಿಯನ್ನು ಸಲ್ಲಿಸತಕ್ಕದ್ದು.
12. ಗ್ರಂಥಾಲಯದ ಸಂಗ್ರಹದಲ್ಲಿರುವ ಪುಸ್ತಕಗಳು ಹರಿದು ಹಾಳಾದ/ಕಳೆದು ಹೋದ ಮತ್ತು ಲಭ್ಯವಿಲ್ಲದ ಸಂದರ್ಭದಲ್ಲಿ ಅಂತಹ ಗ್ರಂಥಗಳನ್ನು ನೇರವಾಗಿ ಮುಖ್ಯ ಗ್ರಂಥಾಲಯಾಧಿಕಾರಿಗಳೇ ಖರೀದಿಸಿ ಗ್ರಂಥಾಲಯದಲ್ಲಿಡುವುದು.
13. ಮುಖ್ಯ ಗ್ರಂಥಾಲಯಾಧಿಕಾರಿಗಳು, ಜಿಲ್ಲಾ/ನಗರ ಪ್ರಾಧಿಕಾರ ಈ ಪುಸ್ತಕ ಖರೀದಿ ಬಗ್ಗೆ ಕೈಗೊಂಡ ಕ್ರಮವನ್ನು ಕುರಿತು ನಿರ್ದೇಶಕರ ಕಛೇರಿಗೆ ವಾರ್ಷಿಕ ವರದಿ ಸಲ್ಲಿಸತಕ್ಕದ್ದು. ಪುಸ್ತಕಗಳ ಆಯ್ಕೆ ಬಗ್ಗೆ ಏನಾದರೂ ದೂರುಗಳಿದ್ದಲ್ಲಿ ನಿರ್ದೇಶಕರಿಗೆ ವರದಿ ಮಾಡತಕ್ಕದ್ದು.
14. **(ಅ) ಪುಸ್ತಕ ಸರಬರಾಜು** : ಮಾರಾಟದ ಬಗ್ಗೆ ಅನ್ವಯವಾಗುವ ತೆರಿಗೆ ಪಾವತಿ ಸೇರಿದಂತೆ, ವಿವಿಧ ಕಾಯಿದೆಗಳನ್ನು ಚಾಚೂ ತಪ್ಪದೆ ಅನುಸರಿಸುವುದು ಮಾರಾಟಗಾರನ : ಸರಬರಾಜುದಾರನ : ಲೇಖಕನ ಜವಾಬ್ದಾರಿಯಾಗಿರುತ್ತದೆ.
    (ಆ) ಪುಸ್ತಕ ಸರಬರಾಜಿಗೆ ಮೊದಲು, ಸರಬರಾಜು ಕಾಲದಲ್ಲಿ ಅಥವಾ ಸರಬರಾಜು ನಂತರ ಇಲಾಖೆಗೆ ತಪ್ಪು ಮಾಹಿತಿಯನ್ನು ನೀಡಿ, ಬೆಲೆಗಳನ್ನು ಸರಿಯಾಗಿ ತಿಳಿಸದೇ, ಗುಣಮಟ್ಟವನ್ನು ಕಾಪಾಡಿಕೊಳ್ಳದೇ ಅಥವಾ ಇನ್ನಾವುದೇ ರೀತಿಯಿಂದಲೂ ಪುಸ್ತಕಗಳ ಸರಬರಾಜು : ಮಾರಾಟ ಸರಿಯಾಗಿ ಆಗದೇ ಇರುವುದು ಕಂಡು ಬಂದಲ್ಲಿ, ಅಂತಹ ಸರಬರಾಜುದಾರರಿಗೆ : ಮಾರಾಟಗಾರರಿಗೆ ಪಾವತಿಯಾಗಿರುವ ಅಥವಾ ಪಾವತಿಯಾಗಬೇಕಾಗಿರುವ ಒಟ್ಟು ಮೊತ್ತವನ್ನು ಮುಟ್ಟುಗೋಲು ಹಾಕಿಕೊಳ್ಳುವುದು ಮತ್ತು ಅಂತಹವರನ್ನು ಸರ್ಕಾರಿ ಇಲಾಖೆಗೆ ಮತ್ತು ಸರ್ಕಾರದ ನಿಯಂತ್ರಣದಲ್ಲಿ ಬರುವ ಎಲ್ಲಾ ಸಂಸ್ಥೆಗಳಿಗೆ ಸಂಬಂಧಿಸಿದ ಪುಸ್ತಕ ಖರೀದಿಗೆ ಸಂಬಂಧಪಟ್ಟಂತೆ ಕಪ್ಪು ಪಟ್ಟಿಗೆ ಸೇರಿಸಬಹುದೆಂದು ಇಲಾಖೆಗೆ ಸ್ಟ್ಯಾಂಪ್ ಪೇಪಾರ್‌ನಲ್ಲಿ ಮುಚ್ಚಳಿಕೆಯನ್ನು ಸರಬರಾಜು : ಖರೀದಿ ಆದೇಶ ನೀಡುವ ಮೊದಲು ಅಂತಹ ಸರಬರಾಜುದಾರರು : ಮಾರಾಟಗಾರರು ನೀಡತಕ್ಕದ್ದು. ಪರಂತು, ಮೇಲೆ ನಮೂದಿಸಿದಂತೆ ಉಲ್ಲಂಘನೆ ಅಥವಾ ಲೋಪದೋಷಗಳಿಗೆ ಅಂತಹ ಕ್ರಮಗಳಿಂದ ಬಾಧಿತನಾಗಬಹುದಾದ ವ್ಯಕ್ತಿಗೆ ಅಥವಾ ಬಾಧಿತವಾಗಬಹುದಾದ ಸಂಸ್ಥೆಗೆ ತನ್ನ ಅಹವಾಲುಗಳನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ನೀಡದ ಹೊರತು ಅಂತಹ ಕ್ರಮಗಳನ್ನು ಕೈಗೊಳ್ಳತಕ್ಕದ್ದಲ್ಲ.

**ಎಂ.ಎನ್.ಸೋಮಶೇಖರ್**

ಪಿ.ಆರ್. 267 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

**ವಿಷಯ :** ವಿದ್ಯಾ ವಿಕಾಸ ಯೋಜನೆಯಡಿ ಉಚಿತ ಸಮವಸ್ತ್ರ ವಿತರಣೆ ಕಾರ್ಯಕ್ರಮವನ್ನು 2005-06ನೇ ಸಾಲಿನಲ್ಲೂ ಮುಂದುವರೆಸುವ ಹಾಗೂ ಕರ್ನಾಟಕ ಕೈ ಮಗ್ಗ ಅಭಿವೃದ್ಧಿ ನಿಗಮ ಹಾಗೂ ಕರ್ನಾಟಕ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮಗಳಿಗೆ ಮುಂಗಡವನ್ನು ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಇಡಿ 59 ಯೋಯೋಕಾ 2004, ದಿ:3-7-2004
2. ಸರ್ಕಾರಿ ಆದೇಶ ಸಂಖ್ಯೆ:ಇಡಿ 59 ಯೋಯೋಕಾ 2004, ದಿ:18-8-2004
3. ಆಯುಕ್ತರು,ಸಾರ್ವಜನಿಕ ಶಿಕ್ಷಣ ಇಲಾಖೆ,ಬೆಂಗಳೂರು ಅವರ ಪತ್ರ ಸಂಖ್ಯೆ:ಅ4(1)ಸಮವಸ್ತ್ರ 26/2004-05,ದಿ:27-11-2004

**ಪ್ರಸ್ತಾವನೆ :**

ಕರ್ನಾಟಕ ಸರ್ಕಾರದ ವಿದ್ಯಾ ವಿಕಾಸ ಯೋಜನೆಯಡಿಯಲ್ಲಿ ಸರ್ಕಾರಿ ಶಾಲೆಗಳಲ್ಲಿ 1 ರಿಂದ 7ನೇ ತರಗತಿಯವರೆವಿಗೆ ವ್ಯಾಸಂಗ ಮಾಡುತ್ತಿರುವ ಎಲ್ಲಾ ಮಕ್ಕಳಿಗೆ ಮತ್ತು 8 ರಿಂದ 10ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ಎಲ್ಲಾ ಹೆಣ್ಣುಮಕ್ಕಳಿಗೆ ಉಚಿತ ಸಮವಸ್ತ್ರ ಬಟ್ಟೆಗಳನ್ನು ಒದಗಿಸುವ ಕಾರ್ಯಕ್ರಮವನ್ನು ಮೇಲೆ(1)ರಲ್ಲಿ ಓದಲಾದ ದಿ:3-7-2004ರ ಸರ್ಕಾರಿ ಆದೇಶದಲ್ಲಿ 2004-05ನೇ ಸಾಲಿಗೆ ಮುಂದುವರಿಸಲಾಯಿತು ಹಾಗೂ ಮೇಲೆ(2)ರಲ್ಲಿ ಓದಲಾದ ದಿ: 18-8-2004 ಸರ್ಕಾರಿ ಆದೇಶದಲ್ಲಿ ಅಗತ್ಯ ಆಯವ್ಯಯವನ್ನು ಒದಗಿಸಲಾಯಿತು. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಅವರು ಮೇಲೆ(3)ರಲ್ಲಿ ಓದಲಾದ ದಿ:27-11-2004ರ ತಮ್ಮ ಪತ್ರದಲ್ಲಿ ಈ ಕಾರ್ಯಕ್ರಮ ವನ್ನು 2005-06ನೇ ಸಾಲಿನಲ್ಲಿ ಮುಂದುವರಿಸಲು ಪ್ರಸ್ತಾವನೆ ಕಳುಹಿಸಿದ್ದಾರೆ.ಈ ಕಾರ್ಯಕ್ರಮವನ್ನು 2005-06ನೇ ಸಾಲಿನಲ್ಲಿಯೂ ಸಹ ಮುಂದುವರಿಸಬೇಕೆಂಬ ಅಂಶವನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 310 ಯೋಯೋಕಾ 2004 ಬೆಂಗಳೂರು, ದಿ: 19ನೇ ಫೆಬ್ರವರಿ 2005**

**(ಇಡಿ 116 ಸ್ಕೀಮರ(ಯೂನಿಕ್) 2005 ದಿ:19/02/2005)**

ವಿದ್ಯಾ ವಿಕಾಸ ಯೋಜನೆಯಡಿಯಲ್ಲಿ ಸರ್ಕಾರಿ ಶಾಲೆಗಳಲ್ಲಿ 1 ರಿಂದ7ನೇ ತರಗತಿಯವರೆಗೆ ವ್ಯಾಸಂಗ ಮಾಡುತ್ತಿರುವ ಎಲ್ಲಾ ಮಕ್ಕಳಿಗೆ ಹಾಗೂ 8 ರಿಂದ 10ನೇ ತರಗತಿಯ ವರೆಗೆ ವ್ಯಾಸಂಗ ಮಾಡುತ್ತಿರುವ ಎಲ್ಲಾ ಹೆಣ್ಣುಮಕ್ಕಳಿಗೆ ಉಚಿತ ಸಮವಸ್ತ್ರ ಸರಬರಾಜು ಮಾಡುವ ಕಾರ್ಯಕ್ರಮವನ್ನು 2005-06ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಇದಕ್ಕಾಗಿ ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 63 ಬಿಆರ್‌ಎಸ್ 2005 ದಿ:31-1-2005ರಲ್ಲಿ ಸಮವಸ್ತ್ರದ ಬಟ್ಟೆಗಳನ್ನು ಸಕಾಲದಲ್ಲಿ ಪೂರೈಕೆ ಮಾಡಲು ಸಹಾಯಕವಾಗುವಂತೆ ಕರ್ನಾಟಕ ಕೈ ಮಗ್ಗ ಅಭಿವೃದ್ಧಿ ನಿಗಮ ಹಾಗೂ ಕರ್ನಾಟಕ ರಾಜ್ಯ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮ ಇವುಗಳಿಗೆ ಮುಂಗಡವನ್ನು ನೀಡುವ ಸಲುವಾಗಿ ರೂ.1485 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಕಾರ್ಯಕ್ರಮದ ಅನುಷ್ಠಾನಕ್ಕಾಗಿ 2004-05ನೇ ಸಾಲಿಗೆ ನೀಡಿದ್ದಂತೆ ಕರ್ನಾಟಕ ಕೈ ಮಗ್ಗ ಅಭಿವೃದ್ಧಿ ನಿಗಮದಿಂದ ಮೈಸೂರು ಮತ್ತು ಗುಲ್ಬರ್ಗಾ ವಿಭಾಗದ ಎಲ್ಲಾ ಜಿಲ್ಲೆಗಳು ಮತ್ತು ಬೆಂಗಳೂರು ವಿಭಾಗದ ಬೆಂಗಳೂರು ಗ್ರಾಮಾಂತರ, ಕೋಲಾರ, ಚಿಕ್ಕಬಳ್ಳಾಪುರ, ಶಿವಮೊಗ್ಗ ಜಿಲ್ಲೆಗಳು ಹಾಗೂ ಕರ್ನಾಟಕ ರಾಜ್ಯ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮದಿಂದ ಬೆಳಗಾವಿ ವಿಭಾಗದ ಎಲ್ಲಾ ಜಿಲ್ಲೆಗಳು ಮತ್ತು ಬೆಂಗಳೂರು ವಿಭಾಗದ ಬೆಂಗಳೂರು ಉತ್ತರ, ಬೆಂಗಳೂರು ದಕ್ಷಿಣ, ತುಮಕೂರು, ಮಧುಗಿರಿ, ಚಿತ್ರದುರ್ಗ, ದಾವಣಗೆರೆ ಜಿಲ್ಲೆಗಳಲ್ಲಿನ ಶಾಲೆಗಳ ವಿದ್ಯಾರ್ಥಿಗಳಿಗೆ ಅಗತ್ಯವಾದ ಸಮವಸ್ತ್ರ ಬಟ್ಟೆಗಳನ್ನು ಆಯುಕ್ತರು,ಸಾರ್ವಜನಿಕ ಶಿಕ್ಷಣ ಇಲಾಖೆ ಅವರು ಖರೀದಿಸತಕ್ಕದ್ದು. ಎರಡೂ ನಿಗಮಗಳಿಗೆ ಮೇಲಿನ ಅನುಪಾತಕ್ಕೆ ಅನುಗುಣವಾಗಿ ಮುಂಗಡವನ್ನು ಪಾವತಿಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ. ಇದರ ವೆಚ್ಚವನ್ನು ಆರ್ಥಿಕ ಇಲಾಖೆಯು ಅನುದಾನ ಬಿಡುಗಡೆ ಮಾಡಿರುವ ಲೆಕ್ಕಶೀರ್ಷಿಕೆ 2202-01-109-0-03-221(ಯೋಜನೆ)ರಲ್ಲಿ ಭರಿಸತಕ್ಕದ್ದು.

ಈಗ ಬಿಡುಗಡೆ ಮಾಡಿರುವ ಹಣಕ್ಕೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಕೈ ಮಗ್ಗ ಅಭಿವೃದ್ಧಿ ನಿಗಮ ಹಾಗೂ ಕರ್ನಾಟಕ ರಾಜ್ಯ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮ ಅವರು ಹಣ ಪಾವತಿ ರಸೀತಿ ತಯಾರಿಸಿ ಅದಕ್ಕೆ ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತರಿಂದ ಮೇಲು ರುಜು ಹೊಂದಿ ಹಣವನ್ನು ಪಡೆಯತಕ್ಕದ್ದು. ಸರಬರಾಜು ಆದೇಶ ನೀಡುವಾಗ ಈಗಾಗಲೇ ಇಲಾಖೆಯಲ್ಲಿ ಹಿಂದಿನ ವರ್ಷ ಸರಬರಾಜಾಗಿ ಉಳಿದ ಬಟ್ಟೆಗಳ ಪ್ರಮಾಣವನ್ನು ಲೆಕ್ಕಹಾಕಿ ಉಳಿದ ಪ್ರಮಾಣದ ಸಮವಸ್ತ್ರಗಳಿಗೆ ಮಾತ್ರ ಬೇಡಿಕೆ ಆದೇಶ ನೀಡುವುದು.

2005-06ನೇ ಸಾಲಿನಲ್ಲಿ ಆದೇಶ ನೀಡುವಾಗ ಈಗಾಗಲೇ ಎರಡೂ ನಿಗಮಗಳಿಗೆ ಪ್ರತಿವಾರದ ಪ್ರಗತಿ ಪರಿಶೀಲನಾ ಸಭೆಯಲ್ಲಿ ನೀಡಿರುವ ಸೂಚನೆಯಂತೆ ಸರಬರಾಜು ಮಾಡಬೇಕಾದ ಒಟ್ಟಾರೆ ಬಟ್ಟೆಯ ಪ್ರಮಾಣದ ಮಿತಿಯೊಳಗೆ 1 ರಿಂದ 10ನೇ ತರಗತಿಯವರೆಗಿನ ಮಕ್ಕಳಿಗೆ ಸರಿಹೊಂದುವಂತೆ ತರಗತಿವಾರು ವಿದ್ಯಾರ್ಥಿಗಳಿಗೆ ಅಗತ್ಯವೆನಿಸುವ ಅಳತೆಯ ಬಟ್ಟೆಗಳನ್ನು ಕತ್ತರಿಸಿ ನೀಡಲು ಅದರ ಪ್ರಮಾಣದಲ್ಲಿ 10 ವಿವಿಧ ಅಳತೆಗಳಲ್ಲಿ ಬಟ್ಟೆಗಳನ್ನು ಸರಬರಾಜು ಮಾಡುವಂತೆ ಎರಡೂ ನಿಗಮಗಳಿಗೆ ಸೂಚಿಸಲೂ ಆದೇಶಿಸಿದೆ. ಸಮವಸ್ತ್ರಗಳ ಸರಬರಾಜು ಆದೇಶ ನೀಡುವಾಗ ಎರಡೂ ನಿಗಮಗಳೊಡನೆ ಸಕಾಲದಲ್ಲಿ ಸಮರ್ಪಕ ಗುಣಮಟ್ಟದ ಬಟ್ಟೆಗಳನ್ನು ಸರಬರಾಜು ಮಾಡಲು ಸೂಕ್ತ ಕರಾರು ಮಾಡಿಕೊಳ್ಳುವುದು.

ಸದರೀ ನಿಗಮಗಳು ಸರಬರಾಜು ಮಾಡುವ ಬಟ್ಟೆಗಳ ಗುಣಮಟ್ಟವನ್ನು ಕಾಯ್ದುಕೊಳ್ಳುವ ಬಗ್ಗೆ ನಿಗಾವಹಿಸತಕ್ಕದ್ದು. ಬಟ್ಟೆಗಳ ಸರಬರಾಜು ಕುರಿತಂತೆ ಮೌಲ್ಯಮಾಪನ ವರದಿಯಲ್ಲಿ ಕಂಡುಬಂದ ಲೋಪಗಳನ್ನು ಸರಿಪಡಿಸಲು ಅಗತ್ಯ ಕ್ರಮಗಳನ್ನು ಕೈಗೊಳ್ಳುವುದು ಹಾಗೂ ಸಮವಸ್ತ್ರ ಬಟ್ಟೆಗಳು ಸಕಾಲದಲ್ಲಿ ಸರಬರಾಜಾಗುತ್ತಿರುವ ಬಗ್ಗೆ ಪ್ರಗತಿಯನ್ನು ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತರು ಆಗಿಂದಾಗ್ಗೆ ಪರಿಶೀಲಿಸತಕ್ಕದ್ದು.

ದಿ:01-04-2005ರಿಂದ ಈ ಕಾರ್ಯಕ್ರಮವು ಜಿಲ್ಲಾವಲಯಕ್ಕೆ ವರ್ಗಾಯಿಸಲ್ಪಟ್ಟಿದ್ದು ಮುಂದಿನ ಹಣವನ್ನು ಈ ಸಂಸ್ಥೆಗಳು ಸಂಬಂಧಿಸಿದ ಜಿಲ್ಲಾಪಂಚಾಯತಿಗಳಿಂದ ಪಡೆಯಬೇಕಾಗಿರುವುದರಿಂದ ಈ ಬಗ್ಗೆ ಜಿಲ್ಲಾ ಪಂಚಾಯತ್‌ಗಳಿಗೆ ವಿವರವಾದ ಮಾರ್ಗಸೂಚಿಗಳನ್ನು ಸಾರ್ವಜನಿಕ ಶಿಕ್ಷಣ ಆಯುಕ್ತರು, ಬೆಂಗಳೂರು ಇವರು ಹೊರಡಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅ.ಟಿ.ಸಂಖ್ಯೆ: ಆಇ 20 ವೆಚ್ಚ-8/2005, ದಿನಾಂಕ: 04-2-2005ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

PR-268

**ಕೆ.ಶ್ರೀಕಂಠೇಶ್ವರ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ(ಯೋಜನೆ), ಶಿಕ್ಷಣ ಇಲಾಖೆ.

## ENERGY SECRETARIAT

**Sub :** Cancellation of 15 M.W. Wind Power Capacity accorded in favour of M/s Enercon India Limited, and accord permission for Transfer of 15 M.W. Wind Power Capacity in favour of M/s Enercon Wind Farms (Krishna) Limited - orders relating to.

**Read :**
1. Government Order No : DE 110 NCE 2004, dated : 11.3.2004.
2. Government Order No : DE 366 NCE 2004, dated : 8.11.2004.
3. Letter No : KRED / 08 / SPML / 2005 / 310, dated : 14.2.2005, received from the Managing Director, Karnataka Renewable Energy Development Limited, Bangalore.

**PREAMBLE :**

In the Government Order dated : 11.3.2004 read at (1) above, sanction was accorded for impelmentation of 19.8 M.W. capacity Wind Power Project at Gadag District, to M/s Subhash Projects and Marketing Limited.

(2) In Government Order read at (2) above, sanction has been accorded for transfer of 15 M.W. Wind Power capacity in favour of M/s Enercon India Limited.

(3) Now, the Managing Director, Karnataka Renewable Energy Development Limited, Bangalore, in his letter dated : 14.2.2005 read at (3) above, has recommended to the Government for transfer of 15 M.W. Wind Power capacity in favour of M/s Enercon Wind Farms (Krishna) Limited, at Kappatagudda, Gadag District and further recommended to cancel the Government Order read at (2) above issued in favour of M/s Enercon India Limited because of its inability to develop the sanctioned capacity

(4) The proposal has been examined and hence the following order :

**Government Order No : EN 32 NCE 2005, Bangalore, Dated: 15th February 2005**

In view of the circumstances explained above, Government are pleased to cancel the Government Order No : DE 366 NCE 2004, dated : 8.11.2004 issued in favour of M/s Enercon India Limited, and accord sanction for transfer of 15 M.W. Wind Power capacity in favour of M/s Enercon Wind Farms (Krishna) Limited, at Hirevaddatti, Chikkavaddati, Kadakol, villages of Kappatagudda Wind Zone, Mundargi Taluk, Gadag District, subject to the following conditions.

a) The company shall pay to Karnataka Renewable Energy Development Limited Detailed Project Report precessing fee @Rs. 25,000/- per M.w. before signing the agreement with Government of Karnataka.

b) The company shall execute and agreement with the Government within 3 months from the date of the issue of the order allocating capacity failing which the allotment order shall be deemed to have automatically lapsed.

c) It shall be compulsory for the allottee to carry out site-specific wind speed measurement at 10 meter and hub hight levels for a minimum of one full wind year. The Company shall prepare (inaccordance with the guidelines issued by KREDL from time to time)and submit (in 3 sets) a DPR containing details of micro siting done and submit the same to KREDL for approval. The Company shall incorporate such modifications in the design or layout of the wind farm as KREDL may recommend in order to ensure optimum generation, safely or other technical requirements.

d) The company shall install wind mast(s), at the rate of one mast for every wind farm of 5 M.w. capacity part thereof, as per the scale mentioned in the lable given below to enable wind speed measurement at wind turbine hub height on a permanent basis to compare the actual performance of wind turbines installed in the farm in relation to the certified power curve of the WEG. The company shall furnish measurement data to KREDL

| Capacity range of WEGS | Approx. number of WEGS in a 5 M.W. wind farm | No. of wind mast to be established |
|---|---|---|
| >200 KW upto 300 KW | 18 | 1 |
| >300 KW upto 500 KW | 15 | 1 |
| >500 KW upto 750 KW | 12 | 1 |
| >750 KW upto 1000 KW | 8 to 10 | 1 |

e) The Company shall prepare a PERT chart showing the various activities and the time required for accomplishing different milestones from the planning to commissioning stage of the project and submit the same to KREDL for monitoring.

f) The Company shall obtain clearances from the Forest, Revenue and other relevant government Departments wherever necessary.

g) Karnataka Power Transmission Corporation Limited is permitted to enter into a Wheeling and Banking agreement / PPA on standard terms of the corporation.

h) Exemption of entry tax on machinery and equipment shall be allowed as per rules that may be in force from time to time.

i) All the Officer of the Government at the District and State level are requested kindly to extend full co-operation to ensure speedy completion of the project.

By Order and in the Name of the Governor of Karnataka

**Suresh B. Krishnappanavar**

PR-278

Under Secretary to Government,

Energy Department.

**Subject:** Sanction of Pensionary Benefits to Nalini M K Menon , retired Member, KERC

**Read:** 1. Order No. GS 54 EST 2003 dated 25th July 2003

2. Notification No. DE 34 PSR 2003 dated 14th July 2004

3. Note No. EN 123 PSR 2004 approved by H.E. Governor of Karnataka

**Preamble:**

Smt. Nalini M K Menon, retired member of KERC has already been sanctioned with pensionary benefits in accordance with Karnataka Electricity Regulatory Commission (Chairman and other members remuneration, allowance and conditions of service) rules, 2000 vide H.E Governor's Order read (1) above, and now she has to be sanctioned with the revised pensionary benefits in accordance with the amendment made to the above rules in Notification read at (2) above.

As per rule 6 (6) of Karnataka Electricity Regulatory Commission (Chairman and other members remuneration, allowance and conditions of service) rules, 2000 as amended from time to time, H.E the Governor of Karnataka is the competent authority for granting pension to Chairman and other members of the Karnataka Electricity Regulatory Commission.

Energy Department sent a submission note, read at (3)above, to H.E. Governor of Karnataka duly indicating the quantum of revised pension, revised gratuity and revised leave encashment in terms of rule 6,7and 5 respectively of the said rules and the same was approved by H.E. Governor of Karnataka on 22.01.2005, subject to deducting the amount already paid to the said retired member.

Hence the following Order:

**GOVERNMENT ORDER NO. EN 123 PSR 2004, BANGALORE, DATED 16th FEBRUARY 2005**

In the circumstances explained in the preamble, the Government are pleased to accord approval for the revised , pension, gratuity and leave encashment in respect of Smt. Nalini M K Menon, (retired member , KERC), as detailed below:

**Revised Pension :** Rs. 33450/- per annum or Rs. 2788/- per month.
(Rs. Thirty three thousand four hundred fifty per annum or Rs.Two thousand seven hundred eighty eight per month. )

**Revised Gratuity :** Rs. 28130/-(Rs. Twenty eight thousand one hundred thirty only )

**Revised Leave Encashment:** Rs. 120900/- (Rs. One lakh twenty thousand nine hundred only),

The above revised amounts are subject to deduction of the amounts already paid.

By Order and in the Name of the Governor of Karnataka

**Suresh B Krishnappanavar**

PR-279

Under Secretary to Government

Energy Department

**Subject:** Sanction of Pensionary Benefits to Sri. H.R. Gopal, retired Member, KERC

**Read:** 1. Order No. GS 54 EST 2003 dated 25th July 2003

2. Notification No. DE 34 PSR 2003 dated 14th July 2004

3. Note No. EN 123 PSR 2004 approved by H.E. Governor of Karnataka

**Preamble:**

Sri. H. R. Gopal,, retired member of KERC has already been sanctioned with pensionary benefits in accordance with Karnataka Electricity Regulatory Commission (Chairman and other members remuneration, allowance and conditions of service) rules, 2000 vide H.E Governor's Order read (1) above, and now he has to be sanctioned with the revised pensionary benefits in accordance with the amendment made to the above rules in Notification read at (2) above.

As per rule 6 (6) of Karnataka Electricity Regulatory Commission (Chairman and other members remuneration, allowance and conditions of service) rules, 2000 as amended from time to time, H.E the Governor of Karnataka is the competent authority for granting pension to Chairman and other members of the Karnataka Electricity Regulatory Commission.

Energy Department sent a submission note, read at (3)above, to H.E. Governor of Karnataka duly indicating the quantum of revised pension, revised gratuity and revised leave encashment in terms of rule 6,7and 5 respectively of the said rules and the same was approved by H.E. Governor of Karnataka on 22.01.2005, subject to deducting the amount already paid to the said retired member.

Hence the following Order:

**GOVERNMENT ORDER NO. EN 123 PSR 2004, BANGALORE, DATED 16th FEBRUARY 2005**

In the circumstances explained in the preamble, the Government are pleased to accord approval for the revised , pension, gratuity and leave encashment in respect of Sri. H.R. Gopal, (retired member , KERC), as detailed below:

**Revised Pension :** Rs. 39035/- per annum or Rs. 3253/- per month. (Rs. Thirty nine thousand thirty five per annum or Rs.Three thousand two hundred fifty three per month. )

**Revised Gratuity :** Rs. 28158/-(Rs. Twenty eight thousand one hundred fifty eight only )

**Revised Leave Encashment :** Rs. 91347/- (Rs. Ninty one thousand three hundred forty seven only),

The above revised amounts are subject to deduction of the amounts already paid.

By Order and in the Name of the Governor of Karnataka

**Suresh B Krishnappanavar**

PR-280

Under Secretary to Government

Energy Department

**Subject**: Sanction of Pensionary Benefits to Sri. Phillipose Mathai , retired Chairman, KERC

**Read**: Note No. EN 123 PSR 2004 approved by H.E. Governor of Karnataka

**Preamble**:

Sri. Phillipose Mathai , assumed the office as chairman KERC on 15.11.1999 and retired on 14.11.2004 after completing five years of service in the Commission.

As per rule 6 (6) of Karnataka Electricity Regulatory Commission (Chairman and other members remuneration, allowance and conditions of service) rules, 2000 as amended from time to time, H.E the Governor of Karnataka is the competent authority for granting pension to Chairman and other members of the Karnataka Electricity Regulatory Commission.

Energy Department sent a submission note, read above, to H.E. Governor of Karnataka duly indicating the quantum of pension, gratuity and leave encashment in terms of rule 6,7and 5 respectively of the said rules and the same was approved by H.E. Governor of Karnataka on 22.01.2005

Hence the following Order:

**GOVERNMENT ORDER NO. EN 123 PSR 2004, BANGALORE, DATED 16th FEBRUARY 2005**

In the circumstances explained in the preamble, the Government are pleased to accord approval for the pension, gratuity and leave encashment in respect of Sri. Phillipose Mathai ( retired Chairman, KERC), as detailed below:

**Pension :** Rs. 73150/- per annum or Rs. 6096/- per month. (Rs. Seventy three thousand one hundred fifty per annum or Rs.Six thousand ninety six per month. )

**Gratuity :** Rs. 45833/-(Rs. Forty five thousand eight hundred thirty three only )

**Leave Encashment :** Rs. 91347/- (Rs. Ninety one thousand three hundred forty seven only)

By Order and in the Name of the Governor of Karnataka

**Suresh B Krishnappanavar**

PR-281

Under Secretary to Government

Energy Department

**COMMERCE & INDUSTRIES SECRETARIAT**

**Subject :** Transfer of Mining lease No.2353 held by M/s.Mineral Enterprises Ltd., in favour of M/s.Teja Works held in Sy.No.37 of Sondevanahalli village, Chikkanayakana-halli taluk, Tumkur district for Manganese, Iron ore and China Clay.

**Read :** Letter No.DMG/08/TRN/2003/1292 dated 15.09.2004 of the Director of Mines and Geology, Bangalore.

**PREAMBLE:**

The Director of Mines and Geology. Bangalore in his letter read above has stated that M/s.Mineral Enterprises Ltd., in letter dated 16.12.2003 have requested for transfer of their Mining Lease No.2353 held in Sondenahally village, Chikkanayakanahalli taluk, Tumkur district over an area of 12-00

acres for Manganese, Iron ore and China Clay for a period of 20 years w.e.f. 03.02.1991 in favour of M/s.Teja Works, which is well versed in marketing of clay as the deposit of clay in the mine is predominant. M/s.Teja Works in letter dated 17.12.2003 have accepted the transfer of mining lease and stated that the amount of consideration contemplated to be given to M/s.Mineral Enterprises Ltd., upon transfer is Rs.60,000.00 being the expenses incurred by them for executing the renewed lease, development of mine as also security deposit made to Government under the said lease and further requested to accord permission to get transfer of mining lease as per Rule 37 of MCR, 1960. Since both the applicants have fulfilled all the requirements as per M.C.Rules, 1960, the Director of Mines and Geology has recommended to Government for transfer of mining lease No.2353 held by M/s.Mineral Enterprises Ltd., in favour of M/s.Teja Works as per Rule 37 of M.C.Rules, 1960. The proposal has been examined.

**GOVERNMENT ORDER NO.CI.130:MMM.2004, BANGALORE, DATED:15th February 2005**

In the circumstances explained in the preamble, the Government are pleased to accord sanction under Rule 37 of M.C.Rules, 1960 for transfer of Mining Lease No.2353 held by M/s.Mineral Enterprises Ltd., in Sondenahally village, Chikkanayakanahalli taluk, Tumkur district over an area of 12-00 acres in favour of M/s.Teja Works, Bangalore.

By Order and in the name of the Governor of Karnataka,

PR-282

**A.B. SIDDHANTI**

Under Secretary to Government (Mines)

Commerce & Industries Department.

**ಇಂಧನ ಸಚಿವಾಲಯ**

**ವಿಷಯ:** ಮೆಸರ್ಸ್ ಸುಭಾಷ್ ಪ್ರಾಜೆಕ್ಟ್ ಮತ್ತು ಮಾರ್ಕೆಟಿಂಗ್ ಲಿಮಿಟೆಡ್ ಕಂಪೆನಿಗೆ ಹಂಚಿಕೆಯಾಗಿರುವ 19.8 ಮೆಗಾ ವ್ಯಾಟ್ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 21.4 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ : ಇಂಇ 110 ಎನ್‌ಸಿಇ 2004, ದಿನಾಂಕ : 11.3.2004.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ / 08 / ಎಸ್‌ಪಿಎಂಎಲ್ / 2005 / 192, ದಿನಾಂಕ : 29/31.1.2005.

**ಪ್ರಸ್ತಾವನೆ:–**

ಮೆಸರ್ಸ್ ಸುಭಾಷ್ ಪ್ರಾಜೆಕ್ಟ್ ಮತ್ತು ಮಾರ್ಕೆಟಿಂಗ್ ಲಿಮಿಟೆಡ್ ಈ ಕಂಪನಿಗೆ ಗದಗ್ ಜಿಲ್ಲೆಯ ಕಪ್ಪದಗುಡ್ಡದಲ್ಲಿ 19.8 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೇಲೆ ಓದಲಾದ (1) ರ ಆದೇಶದಲ್ಲಿ ಹಂಚಿಕೆ ಮಾಡಲಾಗಿದೆ.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೇಲೆ ಓದಲಾದ (2)ರ ಪತ್ರದಲ್ಲಿ ಉದ್ದೇಶಿತ ಯೋಜನೆ ಜಾಗದಲ್ಲಿ ಗಾಳಿಯ ಸಾಂದ್ರತೆ ಹಾಗೂ ಬೀಸುವಿಕೆ ಅಧಿಕವಾಗಿರುವುದರಿಂದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 21.4 ಮೆಗಾ ವ್ಯಾಟ್‌ಗೆ ಹೆಚ್ಚಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

3. ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಂಇ 20 ಎನ್‌ಸಿಇ 2005, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2005**

3. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಹಿನ್ನಲೆಯಲ್ಲಿ ಸರ್ಕಾರವು ಮೆಸರ್ಸ್ ಸುಭಾಷ್ ಪ್ರಾಜೆಕ್ಟ್ ಮತ್ತು ಮಾರ್ಕೆಟಿಂಗ್ ಲಿಮಿಟೆಡ್ ಈ ಕಂಪನಿಗೆ ಗದಗ್ ಜಿಲ್ಲೆಯ ಕಪ್ಪದಗುಡ್ಡದಲ್ಲಿ ಈ ಹಿಂದೆ ಹಂಚಿಕೆ ಮಾಡಲಾದ 19.8 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 21.4 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಮಂಜೂರಾತಿ ನೀಡಲಾಗಿದೆ.

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾವಾಟ್ ಒಂದಕ್ಕೆ ರೂ.25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಅದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ಆಗಿ ನಕ್ಷೆ ಮತ್ತು ವಿಂಡ್ ಫಾರ್ಮ್‌ನ ಲೇ ಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತೀ 5 ಮೆಗಾವಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸ೦ಖ್ಯೆ | ಹಾಕಬೇಕಾಗಿರುವ ಗಾಳಿ ಕ೦ಬ (ವಿ೦ಡ್ ಮಾಸ್ಟ್‌ಗಳ ಸ೦ಖ್ಯೆ |
|---|---|---|
| > 200 ಕಿಲೋ ವ್ಯಾಟ್ ನಿ೦ದ 300 ಕಿಲೋ ವ್ಯಾಟ್ | 18 | 1 |
| > 300 ಕಿಲೋವ್ಯಾಟ್ ನಿ೦ದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿ೦ದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿ೦ದ 1000 ಕಿ.ವ್ಯಾ. | 8 ರಿ೦ದ 10 | 1 |

5. ಯೋಜನೆಯ ವಿವಿಧ ಹ೦ತದ ಚಟುವಟಿಕೆಗಳು ಹಾಗೂ ಯೋಜನೆಗಳಿ೦ದ ಪ್ರಾರ೦ಭದ ಹ೦ತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇ೦ಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅ೦ದರೆ ಅರಣ್ಯ/ ಕ೦ದಾಯ / ಪರಿಸರ ಮತ್ತು ಇತರ ಸ೦ಬ೦ಧಿತ ಇಲಾಖೆಗಳಿ೦ದ ಅನುಮೋದನೆಯನ್ನು ಹ೦ಚಿಕೆದಾರರು ಪಡೆದುಕೊಳ್ಳಬಹುದು.
7. ಮ೦ಡಳಿಯ ನೀತಿ ನಿಯಮಗಳಿಗನುಗುಣವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವೀಲಿ೦ಗ್ ಮತ್ತು ಬ್ಯಾ೦ಕಿ೦ಗ್ / ವಿದ್ಯುತ್ ಖರೀದಿ ಒಡ೦ಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯ೦ತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿ೦ದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವ೦ತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವ೦ತೆ ವಿನ೦ತಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 287

**ಸುರೇಶ್ ಬಿ. ಕೃಷ್ಣಪ್ಪನವರ್,**

ಸರ್ಕಾರದ ಅಧೀನ ಕಾರ್ಯದರ್ಶಿ, ಇ೦ಧನ ಇಲಾಖೆ.

**ವಿಷಯ:** ಮೆ: ಗ್ಲೋಬ್ ಕೋಜನರೇಷನ್ ಪವರ್ ಲಿ. ಕಂಪೆನಿಗೆ ಮೆ: ಶ್ರೀ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತದಲ್ಲಿ ಅನುಮತಿಸಲಾದ 46.250 ಮೆ.ವ್ಯಾ. ಸಾಮರ್ಥ್ಯದ ಸಹ ವಿದ್ಯುತ್ ಯೋಜನೆಯನ್ನು ರದ್ದು ಮಾಡಿ ಮೆ: ಶ್ರೀ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತಕ್ಕೆ ಅನುಮತಿ ನೀಡುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರದ ಪತ್ರ ಸಂಖ್ಯೆ: ಇ೦ಇ 6 ಎನ್‌ಸಿಇ 2001 ದಿನಾಂಕ 25.6.2001.
2. ಸರ್ಕಾರದ ಪತ್ರ ಸಂಖ್ಯೆ: ಇ೦ಇ 6 ಎನ್‌ಸಿಇ 2001 ದಿನಾಂಕ 12.11.2002..
3. ಮೆ: ಶ್ರೀ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಜಿಎಐ/ಕೋಜನ್ 4769/2003–04 ದಿನಾಂಕ 4.12.2003.
4. ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 306 ಎನ್‌ಸಿಇ 2003 ದಿನಾಂಕ 28.8.2004.
5. ಮೆ: ಗ್ಲೋಬ್ ಕೋಜನರೇಷನ್ ಪವರ್ ಲಿ. ಕಂಪೆನಿಯವರು ಕಾರಣ ಕೇಳುವ ನೋಟೀಸಿಗೆ ನೀಡಿರುವ ಉತ್ತರ ದಿನಾಂಕ 28.8.2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಮೆ: ಗ್ಲೋಬ್ ಕೋಜನರೇಷನ್ ಪವರ್ ಲಿ. ಕಂಪೆನಿಗೆ ಬೆಳಗಾವಿ ಜಿಲ್ಲೆಯ ಸಂಕೇಶ್ವರದಲ್ಲಿ ಇರುವ ಮೆ: ಶ್ರೀ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತದ ಸಕ್ಕರೆ ಕಾರ್ಖಾನೆಯಲ್ಲಿ Boot ಆಧಾರದಲ್ಲಿ 45 ಮೆಗಾವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಉತ್ಪಾದನೆ ಮಾಡಲು ನಿರಾಕ್ಷೇಪಣೆ ನೀಡಲಾಗಿತ್ತು.

2. ಮೇಲೆ ಓದಲಾದ (2)ರ ಪತ್ರದಲ್ಲಿ ಮೆ: ಗ್ಲೋಬ್ ಕೋಜನರೇಷನ್ ಪವರ್ ಲಿ. ಕಂಪೆನಿಗೆ ಅನುಮತಿಸಲಾದ ಸಾಮರ್ಥ್ಯವನ್ನು 45 ಮೆಗಾವ್ಯಾಟ್‌ನಿಂದ 46.250 ಮೆಗಾವ್ಯಾಟ್‌ಗೆ ಹೆಚ್ಚಿಸಲಾಗಿತ್ತು.

3. ಮೇಲೆ ಓದಲಾದ (3)ರ ಪತ್ರ'ದಲ್ಲಿ ಮೆ: ಶ್ರೀ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಗ್ಲೋಬ್ ಕೋಜನರೇಷನ್ ಪವರ್ ಲಿ. ಕಂಪೆನಿಯು ಮೆ: ಶ್ರೀ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತದೊಂದಿಗೆ ಮಾಡಿಕೊಂಡಿರುವ ಯೋಜನಾ ಅಭಿವೃದ್ಧಿ ಒಡಂಬಡಿಕೆ (Project Development Agreement) ಷರತ್ತುಗಳಿಗೆ ಸರಿಯಾಗಿ ಬದ್ಧ ಆಗಿಲ್ಲವೆಂದು ತಿಳಿಸುತ್ತಾ, ಇದರಿಂದ ಕಂಪೆನಿಗೆ ನಷ್ಟವಾಗಿರುವುದರಿಂದ ಮೆ: ಗ್ಲೋಬ್ ಕೋಜನರೇಷನ್ ಪವರ್ ಲಿ. ಕಂಪೆನಿಗೆ ಅನುಮತಿಸಲಾದ ಸಹ ವಿದ್ಯುತ್ ಯೋಜನಾ ನಿರಾಕ್ಷೇಪಣೆಯನ್ನು ರದ್ದು ಮಾಡಿ ಮೆ: ಶ್ರೀ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತಕ್ಕೆ ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

4. ಮೇಲೆ ಓದಲಾದ ಕ್ರಮಸಂಖ್ಯೆ (4)ರಲ್ಲಿ ಸರ್ಕಾರವು ಮೆ: ಗ್ಲೋಬ್ ಕೋಜನರೇಷನ್ ಪವರ್ ಲಿ. ಕಂಪೆನಿಗೆ ಕಾರಣ ಕೇಳುವ ನೋಟೀಸನ್ನು ನೀಡಿ ಮೆ: ಶ್ರೀ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತದೊಂದಿಗೆ ಮಾಡಿಕೊಂಡಿರುವ ಯೋಜನಾ ಅಭಿವೃದ್ಧಿ ಒಡಂಬಡಿಕೆಗೆ ಬದ್ಧವಾಗಿಲ್ಲದಿರುವುದರಿಂದ ನಿರಾಕ್ಷೇಪಣೆಯನ್ನು (Noc) ಏಕೆ ರದ್ದು ಮಾಡಬಾರದು ಎಂಬ ಬಗ್ಗೆ ಕಾರಣವನ್ನು ಕೇಳಿತ್ತು.

5. ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಮೆ: ಗ್ಲೋಬ್ ಕೋಜನರೇಷನ್ ಪವರ್ ಲಿ. ಕಂಪೆನಿಯವರು ಸದರಿ ಕಾರಣ ಕೇಳಿ ನೋಟೀಸಿಗೆ ಉತ್ತರವನ್ನು ನೀಡಿರುತ್ತಾರೆ. ಸದರಿ ಉತ್ತರವು ಸಮಾಧಾನಕರವಾಗಿಲ್ಲವೆಂದು ತಿಳಿದು ಸದರಿ ವಿಷಯವನ್ನು ಸರ್ಕಾರದ ಮಟ್ಟದಲ್ಲಿ ಕಾನೂನು ಇಲಾಖೆಯೊಂದಿಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರಿ ಆದೇಶ ಸಂಖ್ಯೆ: ಇಂಇ 306 ಎನ್‌ಸಿಇ 2003 ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2005

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಮೆ: ಗ್ಲೋಬ್ ಕೋಜನರೇಷನ್ ಪವರ್ ಲಿ. ಕಂಪೆನಿಗೆ ಈ ಹಿಂದೆ ಸರ್ಕಾರಿ ಆದೇಶ ದಿನಾಂಕ 25.6.2001 ಮತ್ತು 12.11.2002 ರಲ್ಲಿ 46.250 ಮೆಗಾವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಯೋಜನೆಯನ್ನು ಸ್ಥಾಪಿಸಲು ನೀಡಿರುವ ನಿರಾಕ್ಷೇಪಣೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಮಾಡಲಾಗಿದೆ. ಹಾಗೂ ಮೆ: ಶ್ರೀ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತಕ್ಕೆ ಬೆಳಗಾವಿ ಜಿಲ್ಲೆಯ ಸಂಕೇಶ್ವರದ ತನ್ನ ಸಕ್ಕರೆ ಕಾರ್ಖಾನೆಯಲ್ಲಿ 46.250 ಮೆಗಾವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಯೋಜನೆಯನ್ನು BOOT ಆಧಾರದಲ್ಲಿ ಸ್ಥಾಪಿಸಲು ಸರ್ಕಾರದ ನಿರಾಕ್ಷೇಪಣೆಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

(1) The Company shall obtain separate clearance from Karnataka Power Transmission Corporation Limited in respect of evacuation of power.
(2) The Company shall enter into wheeling and Banking agreement with Karnataka Power Transmission Corporation Limited in case of selling power to third party and power purchase agreement in case of selling power to Karnataka Power Transmission Corporation Limited.
(3) The Company shall obtain necessary statutory clearance wherever required from the respective Departments /Organisations such as Forest Department, Revenue Department & Karnataka State Pollution Control Board etc. for both the Sugar Mill and the Power plant.
(4) The Detailed Project Report (D.P.R.) for the power plant shall be got approved by Karnataka Renewable Energy Development Limited before the commencement of the power plant.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 288

**ಸುರೇಶ್ ಬಿ.ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಒಳಾಡಳಿತ ಸಚಿವಾಲಯ

ವಿಷಯ: ನಕ್ಸಲೀಯರ ದಾಳಿಯಲ್ಲಿ ಮೃತರಾದ/ಗಾಯಗೊಂಡ ಪೊಲೀಸ್ ಕುಟುಂಬದವರಿಗೆ ಅನುಗ್ರಹಪೂರ್ವಕ ಪರಿಹಾರ ಧನವನ್ನು ಮಂಜೂರು ಮಾಡುವ ಬಗ್ಗೆ.

ಓದಲಾಗಿದೆ: 1) ಡಿಜಿ ಹಾಗೂ ಐಜಿಪಿ ರವರ ಪತ್ರ ಸಂಖ್ಯೆ:ಬಿಎಫ್ 258/2001, ದಿನಾಂಕ:14/02/2005.

2) ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ/141 ಪೊಸಿಇ/1993, ದಿನಾಂಕ:27-05-1993.

ಪ್ರಸ್ತಾವನೆ:

ಮೇಲೆ ಓದಲಾದ(1)ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರು ರಾಜ್ಯದ ಗಡಿ ಜಿಲ್ಲೆಗಳಾದ ಬಳ್ಳಾರಿ, ಬೀದರ್, ಗುಲ್ಬರ್ಗಾ, ಚಿಕ್ಕಮಗಳೂರು, ತುಮಕೂರು, ಕೋಲಾರ ಇತ್ಯಾದಿ ಜಿಲ್ಲೆಗಳಲ್ಲಿ ನಕ್ಸಲೀಯ ಚಟುವಟಿಕೆಗಳು ಹೆಚ್ಚಾಗಿದ್ದು, ಇದನ್ನು ಹತ್ತಿಕ್ಕುವ ಪ್ರಯತ್ನದಲ್ಲಿ ಪೊಲೀಸರು ಹಗಲಿರಳು ಶ್ರಮವಹಿಸಿ ಕರ್ತವ್ಯ ನಿರ್ವಹಿಸುತ್ತಿದ್ದಾರೆಂದು, ಈ ನಿಟ್ಟಿನಲ್ಲಿ ದಿನಾಂಕ: 06-02-2005ರಂದು ಬೆಳಗಿನ ಜಾವ ಪೊಲೀಸರಿಗೂ ನಕ್ಸಲಿಯರಿಗೂ ನಡೆದ ಗುಂಡಿನ ಚಕಮಕಿಯಲ್ಲಿ ನಕ್ಸಲಿಯ ನಾಯಕರನ್ನು ಒಳಗೊಂಡಂತೆ ಇಬ್ಬರನ್ನು ಹತ್ಯೆಗೈದ ಹಿನ್ನೆಲೆಯಲ್ಲಿ ಹಾಗೂ ದಿನಾಂಕ: 10-02-2005ರಂದು ತುಮಕೂರು ಜಿಲ್ಲೆಯ ತಿರುಮಣಿ ಪೊಲೀಸ್ ಠಾಣೆಯ ವ್ಯಾಪ್ತಿಯ ವೆಂಕಟಬೊಮ್ಮನಹಳ್ಳಿಯಲ್ಲಿ ಕೆ.ಎಸ್.ಆರ್.ಪಿ. ಸಿಬ್ಬಂದಿಯ ಮೇಲೆ ನಕ್ಸಲಿಯರ ಗುಂಪೊಂದು ದಾಳಿ ನಡೆಸಿದ ಪರಿಣಾಮವಾಗಿ 7 ಪೊಲೀಸ್ ಸಿಬ್ಬಂದಿಯವರು ಹತ್ಯೆಗೀಡಾಗಿದ್ದು, ಇನ್ನೂ ಹಲವು ಸಿಬ್ಬಂದಿಯವರು ಗಾಯಗೊಂಡಿರುತ್ತಾರೆಂದು ವರದಿಮಾಡಿರುತ್ತಾರೆ.

ಮುಂದುವರೆದು ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ವೀರಪ್ಪನ ಕಾರ್ಯಾಚರಣೆಯಲ್ಲಿ ವೀರಪ್ಪನಿಂದ ಹತರಾದ ಪೊಲೀಸ್ ಸಿಬ್ಬಂದಿಯವರಿಗೆ ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 141 ಪೊಸಿಇ 93 ದಿನಾಂಕ 27-05-93ರನ್ವಯ ನೀಡುವ ಆರ್ಥಿಕ ಸೌಲಭ್ಯಗಳಂತೆ ಪ್ರಸ್ತುತದಲ್ಲಿ ನಕ್ಸಲಿಯರಿಂದ ಹತರಾದ ಪೊಲೀಸ್ ಸಿಬ್ಬಂದಿ ಕುಟುಂಬಕ್ಕೆ ರೂ.10.00 ಲಕ್ಷ ಅನುಗ್ರಹಪೂರ್ವಕ ಮೊತ್ತವನ್ನು ಮತ್ತು ವೈದ್ಯಕೀಯ ಮರುಪಾವತಿ, ವಸತಿ ಸೌಲಭ್ಯ ಹಾಗೂ ಇತ್ಯಾದಿ ಸವಲತ್ತುಗಳನ್ನು ನೀಡುವಂತೆ ಈ ಕೆಳಕಂಡ ಪರಿಹಾರವನ್ನು ಬಯಸಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| | | |
|---|---|---|
| 1 | ಮೃತಪಟ್ಟಿರುವ ಸಿಬ್ಬಂದಿಗಳ ಕುಟುಂಬದವರಿಗೆ ಅನುಗ್ರಹಪೂರ್ವಕ ಮೊತ್ತ | ರೂ.10.00 ಲಕ್ಷ |
| 2 | ಶಾಶ್ವತ ಅಂಗವಿಕಲತೆ ಹೊಂದಿದ ಸಿಬ್ಬಂದಿ/ಅಧಿಕಾರಿಯವರಿಗೆ | ರೂ.2.00 ಲಕ್ಷ |
| 3 | ಗುರುತರವಾದ ಗಾಯಗೊಂಡಿರುವ ಸಿಬ್ಬಂದಿ/ಅಧಿಕಾರಿಯವರಿಗೆ | ರೂ.0.40 ಲಕ್ಷ |
| 4 | ಸಾಧಾರಣ ಗಾಯಗೊಂಡಿರುವ ಸಿಬ್ಬಂದಿ/ಅಧಿಕಾರಿಯವರಿಗೆ | ರೂ.0.20 ಲಕ್ಷ |

ಅಲ್ಲದೆ,

1. ಗಾಯಗೊಂಡ ಸಿಬ್ಬಂದಿಗಳ/ಅಧಿಕಾರಿಗಳಿಗೆ ತಗಲುವ ವೈದ್ಯಕೀಯ ವೆಚ್ಚವನ್ನು ಸರ್ಕಾರವೇ ಭರಿಸುವುದು.

2. ಮೃತಪಟ್ಟ ನೌಕರ/ಅಧಿಕಾರಿಗಳು ಅಂತಿಮವಾಗಿ ಪಡೆದ ವೇತನವನ್ನು ಅವರ ಕುಟುಂಬದವರಿಗೆ, ಮೃತಪಟ್ಟ ನೌಕರ/ಅಧಿಕಾರಿ ವಯೋನಿವೃತ್ತಿ ಹೊಂದುವ ದಿನಾಂಕದವರಿಗೆ ನೀಡುವುದು.

3. ಮೃತಪಟ್ಟ ನೌಕರ/ಅಧಿಕಾರಿಗಳು ವಸತಿ ಗೃಹದಲ್ಲಿ ವಾಸಿಸುತ್ತಿದ್ದಲ್ಲಿ, ಅವರ ಕುಟುಂಬದವರು, ಮೃತಪಟ್ಟ ನೌಕರ/ಅಧಿಕಾರಿ ವಯೋನಿವೃತ್ತಿ ಹೊಂದುವ ದಿನಾಂಕದವರಿಗೆ ಸದರಿ ವಸತಿ ಗೃಹದಲ್ಲಿ ವಾಸಿಸಲು ಅನುಮತಿ ನೀಡುವುದು. ಒಂದು ವೇಳೆ ಮೃತರ ಕುಟುಂಬದವರು ವಸತಿ ಗೃಹದಲ್ಲಿ ವಾಸಿಸಲು ಇಚ್ಛಿಸದೇ ಇದ್ದಲ್ಲಿ, ಕಾಲಕಾಲಕ್ಕೆ ಅವರು ಪಡೆಯುತ್ತಿದ್ದ ಮನೆಬಾಡಿಗೆ ಭತ್ಯೆಯನ್ನು ನೀಡುವುದು.

ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ದಿನಾಂಕ: 05-02-2005 ರಿಂದ ಜಾರಿಗೆ ಬರುವಂತೆ ನಕ್ಸಲೀಯರ ವಿರುದ್ಧದ ಕಾರ್ಯಾಚರಣೆಯಲ್ಲಿ ಮೃತಪಟ್ಟ ಪೊಲೀಸ್ ಕುಟುಂಬದವರಿಗೆ, ಶಾಶ್ವತವಾಗಿ ಅಂಗವಿಕಲತೆ ಹೊಂದಿದ ಹಾಗೂ ಗಾಯಗೊಂಡ ಪೊಲೀಸ್ ಸಿಬ್ಬಂದಿಗಳಿಗೆ ಮೇಲೆ ಹೇಳಿದ ಅನುಗ್ರಹ ಪೂರ್ವಕ ಪರಿಹಾರ ಧನವನ್ನು ನೀಡಲು ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಮೇಲೆ ಓದಲಾದ(2)ರ ಸರ್ಕಾರದ ಆದೇಶದಲ್ಲಿ ಕುಪ್ರಸಿದ್ಧ ಕಳ್ಳ ಸಾಗಣಿದಾರ ಮತ್ತು ಡಕಾಯಿತ ವೀರಪ್ಪನ್ ಸಂಬಂಧದ ಕಾರ್ಯಚರಣೆಯಲ್ಲಿ ಕಾರ್ಯನಿರತರಾಗಿರುವಾಗ ಮೃತರಾದ ಪೊಲೀಸು ಅಧಿಕಾರಿಗಳು: ಸಿಬ್ಬಂದಿಗಳು (ಕರ್ನಾಟಕ ಕೇಡರಿನ ಐ.ಪಿ.ಎಸ್ ಹೊಂದಿರುವ ಅಧಿಕಾರಿಗಳೂ ಸೇರಿದಂತೆ) ಕುಟುಂಬದವರಿಗೆ ಈ ಮುಂದಿನ ಅನುಗ್ರಹ ಪೂರ್ವಕ ಸೌಲಭ್ಯಗಳನ್ನು ಮಂಜೂರು ಮಾಡಲಾಗಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಶವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 65 ಪೊಸಿಇ 2005, ಬೆಂಗಳೂರು ದಿನಾಂಕ: 16ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್ಲಾ ಅಂಶಗಳನ್ನು ಗಮನಿಸಿ ನಕ್ಸಲೀಯರ ದಾಳಿಯಲ್ಲಿ ಮೃತರಾದ/ಗಾಯಗೊಂಡ ಪೊಲೀಸ್ ಕುಟುಂಬದವರಿಗೆ ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 141 ಪೊಸಿಇ 1993 ದಿನಾಂಕ:27-05-1993ರಲ್ಲಿ ವೀರಪ್ಪನ್ ಕಾರ್ಯಚರಣೆಯಲ್ಲಿ ಮೃತರಾದ ಅಥವಾ ಗಾಯಗೊಂಡ ಪೊಲೀಸ್ ಸಿಬ್ಬಂದಿಯವರಿಗೆ ನೀಡಲಾಗಿರುವ ಪರಿಹಾರ ಸೌಲಭ್ಯಗಳನ್ನು ನಕ್ಸಲೀಯ ದಾಳಿಯಲ್ಲಿ ಮೃತರಾದ ಅಥವಾ ಗಾಯಗೊಂಡ ಪೊಲೀಸ್ ಸಿಬ್ಬಂದಿಗೆ ದಿನಾಂಕ:05-02-2005ರಿಂದ ಅನ್ವಯವಾಗುವಂತೆ ಈ ಕೆಳಕಂಡಂತೆ ಅನುಗ್ರಹಪೂರ್ವಕ ಪರಿಹಾರ ಧನವನ್ನು ಹಾಗೂ ಇತರ ಸೌಲಭ್ಯಗಳನ್ನು ಮಂಜೂರು ಮಾಡಲಾಗಿದೆ:-

(ಎ) ಈ ಕಾರ್ಯಾಚರಣೆಯಲ್ಲಿ ಕೊಲ್ಲಲ್ಪಟ್ಟವರಿಗೆ(ಅಧಿಕಾರಿಗಳು ಮತ್ತು ಸಿಬ್ಬಂದಿಯವರು ಒಳಗೊಳ್ಳುತ್ತಾರೆ) ರೂ.5,00,000-00 ಗಳ (ಐದು ಲಕ್ಷ ರೂಪಾಯಿಗಳು ಮಾತ್ರ) ಅನುಗ್ರಹ ಪೂರ್ವಕ ಪರಿಹಾರಧನ (ಸಿವಿಲ್ ಪೊಲೀಸು, ಕರ್ನಾಟಕ ರಾಜ್ಯ ಮೀಸಲು ಪೊಲೀಸು, ಸಶಸ್ತ್ರ ಮೀಸಲು ಮತ್ತು ಮೌಂಟೆಡ್ ಪೊಲೀಸರ ಪಡೆಗಳಲ್ಲಿರುವ ಪೊಲೀಸು ಕಾನ್ಸ್‌ಟೇಬಲ್ ಮತ್ತು ಹೆಡ್ ಕಾನ್ಸ್‌ಟೇಬಲ್‌ಗಳ ಸಂಬಂಧದಲ್ಲಿ ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 202 ಪಿಸಿಇ 90, ದಿನಾಂಕ:25-01-1991ರಲ್ಲಿ ಆದೇಶಿಸಿದ ಸಮೂಹ ವಿಮಾ ಯೋಜನೆಯ ಸೌಲಭ್ಯವೂ ಸೇರಿದಂತೆ);

(ಬಿ) ಗುಂಡಿನೇಟಿನಿಂದ ಗಾಯಗೊಂಡವರಿಗೆ 1,00,000-00 ರೂ.ಗಳು (ಒಂದು ಲಕ್ಷ ರೂಪಾಯಿಗಳು);

(ಸಿ) ಇತರ ರೀತಿಯ ಗಾಯಗಳುಂಟಾದವರಿಗೆ 10,000-00 (ಹತ್ತು ಸಾವಿರ ರೂಪಾಯಿಗಳು);

(ಡಿ) ಮೃತಪಟ್ಟ ಅಧಿಕಾರಿ/ನೌಕರನು ಅಂತಿಮವಾಗಿ ಪಡೆದ ವೇತನವನ್ನು ಅವರು ಮೃತಪಟ್ಟ ದಿನಾಂಕದಿಂದ ಮೃತಪಟ್ಟ ಅಧಿಕಾರಿ/ನೌಕರರು ವಯೋನಿವೃತ್ತರಾಗುತ್ತಿದ್ದ ದಿನಾಂಕದವರೆಗೆ ನೀಡಲಾಗುವುದು, ವಯೋನಿವೃತ್ತಿಯ ದಿನಾಂಕದ ನಂತರ ಕುಟುಂಬಕ್ಕೆ ನಿಯಮಗಳ ಪ್ರಕಾರ ಲಭ್ಯವಾಗುವ ಕುಟುಂಬ ವಿಶ್ರಾಂತಿ ವೇತನವನ್ನು ನೀಡಲಾಗುವುದು;

(ಇ) ನಿಯಮಗಳ ಮೇರೆಗೆ ನೀಡಬಹುದಾದಂತೆ ಆತನ ಮರಣದ ದಿನಾಂಕದಂದು ಆತನು ಪಡೆಯುತ್ತಿದ್ದ ಮನೆ ಬಾಡಿಗೆ ಭತ್ಯೆಯನ್ನು ಅಥವಾ ಬಾಡಿಗೆ ರಹಿತ ವಸತಿ ಸೌಲಭ್ಯವನ್ನು ಅವನಿಗೆ ಒದಗಿಸದೇ ಇದ್ದಲ್ಲಿ ಆತನು ಪಡೆಯಲು ಅರ್ಹನಾಗುತ್ತಿದ್ದ ಮನೆ ಬಾಡಿಗೆ ಭತ್ಯೆಯನ್ನು ಮೃತ ಅಧಿಕಾರಿ/ನೌಕರನ ವಯೋನಿವೃತ್ತಿಯ ಅವಧಿಯವರೆಗೂ ನೀಡಲಾಗುವುದು.

ಅಲ್ಲದೆ ಮೇಲೆ ಸೂಚಿಸಿರುವ ಅನುಗ್ರಹಪೂರ್ವಕ ಪರಿಹಾರ ಧನವನ್ನು ಹಾಗೂ ಇತರ ಸೌಲಭ್ಯಗಳನ್ನು ಈ ಕೆಳಕಂಡ ಷರತ್ತುಗಳನ್ನು ಪೂರೈಸುವ ಷರತ್ತಿಗೆ ಒಳಪಟ್ಟು ಮಂಜೂರು ಮಾಡಲು ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರಿಗೆ ಅಧಿಕಾರವನ್ನು ನೀಡಲಾಗಿದೆ.

(1) ಸರ್ಕಾರಿ ಆಸ್ಪತ್ರೆಗಳ ಅಧಿಕೃತ ವೈದ್ಯಾಧಿಕಾರಿಗಳು (Authorised Medical Attendant) ಪೊಲೀಸ್ ಸಿಬ್ಬಂದಿ/ಅಧಿಕಾರಿಗಳ ಗಾಯಗಳ ಸ್ವರೂಪದ ಬಗ್ಗೆ ನೀಡುವ ಪ್ರಮಾಣ ಪತ್ರವನ್ನು ಒದಗಿಸತಕ್ಕದ್ದು.

(2) ಪೊಲೀಸ್ ಸಿಬ್ಬಂದಿ/ಅಧಿಕಾರಿಗಳು ಯಾವ ಪ್ರಸಂಗಗಳಲ್ಲಿ ಮರಣ ಹೊಂದಿದರು/ಗಾಯಗೊಂಡರು ಎಂಬುದಕ್ಕೆ ಪೂರಕ ಆಧಾರಗಳನ್ನು ಮತ್ತು ದಾಖಲೆಗಳನ್ನು ಸಂಬಂಧಿತ ಮೇಲಾಧಿಕಾರಿಯಿಂದ ದೃಢೀಕರಿಸಿ ಒದಗಿಸತಕ್ಕದ್ದು.

(3) ಪೊಲೀಸ್ ಸಿಬ್ಬಂದಿ/ಅಧಿಕಾರಿಗಳು ಕರ್ತವ್ಯನಿರತರಾಗಿದ್ದಾಗ ಮರಣ ಹೊಂದಿದ್ದಲ್ಲಿ, ಮರಣ ದೃಢೀಕೃತ ಪತ್ರವನ್ನು ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 366/ವೆಚ್ಚ-6/2005, ದಿನಾಂಕ:15-02-2005ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶನಾಸಾರ ಮತ್ತು ಅವರ ಹೆಸರಿನಲ್ಲಿ,

PR-297

**ಆರ್.ರಂಗಮಣಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

## ಕಂದಾಯ ಸಚಿವಾಲಯ

**ವಿಷಯಃ** ಬೆಂಗಳೂರು ಮೆಟ್ರೊಪಾಲಿಟನ್ ಟಾಸ್ಕ್ ಫೋರ್ಸ್ ಮೂಲಕ ಬೆಂಗಳೂರು ನಗರ ಮತ್ತು ಸುತ್ತಮುತ್ತಲಿನ ಅನಧಿಕೃತ ಒತ್ತುವರಿ ಖುಲ್ಲಾಪಡಿಸುವ ಕಾರ್ಯವನ್ನು ಕಂದಾಯ ಇಲಾಖೆಯೊಡನೆ ಅಗತ್ಯ ನೇರವಿನೊಂದಿಗೆ ಪರಿಣಾಮಕಾರಿಯಾಗಿ ಮಾಡಲು ರಾಜ್ಯಮಟ್ಟದಲ್ಲಿ ಚಾಲನಾ ಸಮಿತಿ ಮತ್ತು ಬೆಂಗಳೂರು ಜಿಲ್ಲಾ ಮಟ್ಟದಲ್ಲಿ ಸಮನ್ವಯ ಸಮಿತಿ ರಚಿಸುವ ಪ್ರಸ್ತಾವೆ ಬಗ್ಗೆ

**ಓದಲಾಗಿದೆಃ** (1) ಹಿಂದಿನ ವಿಭಾಗಾಧಿಕಾರಿಗಳ ಅರೆ ಸರ್ಕಾರಿ ಪತ್ರದ ಸಂಖ್ಯೆಃLND(B):CR:56:98-99 ದಿನಾಂಕ 27-1-2001.

(2) ಸರ್ಕಾರಿ ಆದೇಶ ಸಂಖ್ಯೆಃ UDD 247 MNU 95 ದಿನಾಂಕ 19-8-96.

(3) ಸರ್ಕಾರಿ ಆದೇಶ ಸಂಖ್ಯೆಃUDD 110 MNU 97 ದಿನಾಂಕ 3-8-97.

**ಪ್ರಸ್ತಾವನೆಃ**

ಬೆಂಗಳೂರು ನಗರ ಮತ್ತು ಸುತ್ತಮುತ್ತಲು ಬೆಲೆ ಬಾಳುವ ಸರ್ಕಾರಿ ಜಮೀನುಗಳ ಬಗ್ಗೆ ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ಒತ್ತುವರಿ ಮಾಡಿಕೊಳ್ಳುತ್ತಿರುವ ಅನೇಕ ರೀತಿಯ ಭೂ ಕಂದಾಯ ಉಲ್ಲಂಘನೆ ಮತ್ತು ಕೃಷಿ ಜಮೀನನ್ನು ಭೂ ಪರಿವರ್ತನೆಗೆ ಅನುಮತಿ ಪಡೆಯದೇ ಅನಧಿಕೃತವಾಗಿ ಕೃಷಿಯೇತರ ಉದ್ದೇಶಕ್ಕಾಗಿ ಬಳಸುತ್ತಿರುವ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿವೆ ಮತ್ತು ಈ ವಿಷಯವು ವಿಧಾನ ಮಂಡಲದ ಉಭಯ ಸದನಗಳಲ್ಲಿ ಅನೇಕ ಬಾರಿ ಪ್ರಸ್ತಾಪವಾಗಿದೆ. ದಿನಾಂಕ 15-1-2001ರಂದು ಮಾನ್ಯ ಹಿಂದಿನ ಮುಖ್ಯಮಂತ್ರಿಗಳ

ಅಧ್ಯಕ್ಷತೆಯಲ್ಲಿ ನಡೆದ ಉನ್ನತ ಅಧಿಕಾರಿಗಳ ಸಮನ್ವಯ ಸಭೆಯಲ್ಲಿ ಕಂದಾಯ ಇಲಾಖೆಯಲ್ಲಿ ``ವಿಶೇಷ ಟಾಸ್ಕ್ ಫೋರ್ಸ್ ಪಡೆ`` ರಚಿಸುವ ಬಗ್ಗೆ ನಿರ್ಣಯ ಕೈಗೊಳ್ಳಲಾಗಿತ್ತು.

ಈ ಹಿನ್ನೆಲೆಯಲ್ಲಿ ಹಿಂದಿನ ವಿಭಾಗಾಧಿಕಾರಿ ಬೆಂಗಳೂರು ಇವರು ಓದಲಾದ(1) ರ ಪತ್ರದಲ್ಲಿ ಕಂದಾಯ ಇಲಾಖೆಯ ಅದೀನದಲ್ಲಿ ಒಂದು ವಿಶೇಷ ಕಾರ್ಯಪಡೆ (Special Task force) ರಚನೆಗೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು.

ಓದಲಾದ (2)ರ ಸರ್ಕಾರಿ ಆದೇಶದ ಅನ್ವಯ ನಗರಾಭಿವೃದ್ಧ ಇಲಾಖೆಯ ಅಧೀನದಲ್ಲಿ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್ ಇವರ ನೇತೃತ್ವದಲ್ಲಿ ಬೆಂಗಳೂರು ಮೆಟ್ರೋಪಾಲಿಟನ್ ಟಾಸ್ಕ್‌ಫೋರ್ಸ್ ಎಂಬ ನಾಮಕರಣದಲ್ಲಿ ವಿಶೇಷ ದಳ ಅಸ್ಥಿತ್ವದಲ್ಲಿರುವು ದು.

ಓದಲಾದ (3)ರ ಸರ್ಕಾರಿ ಆದೇಶದ ಅನ್ವಯ ಸದರಿ ವಿಶೇಷ ದಳವನ್ನು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್ ಇವರ ನೇತೃತ್ವದಲ್ಲಿ ತರಲಾಯಿತು. ನಗರಾಭಿವೃದ್ಧಿ ಇಲಾಖೆಯ ಕಾರ್ಯವ್ಯಾಪ್ತಿಯಲ್ಲಿ ಬರುವ ಕಾನೂನು ಮತ್ತು ನಿಯಮಗಳೊಳಗೊಂಡಂತೆ ಕಂದಾಯ ಇಲಾಖೆಗೆ ಸಂಬಂಧಿಸಿದ (1) ಭೂ ಕಂದಾಯ ಕಾಯಿದೆ 1964, (2) ಕರ್ನಾಟಕ ಭೂ ಸುಧಾರಣಾ ಕಾಯಿದೆ, (3) ಕರ್ನಾಟಕ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಗಳ (ಕೆಲವು ಜಮೀನುಗಳ ಪರಬಾರೆ ನಿಷೇಧ) ಕಾಯಿದೆ 1978ರ ಉಲ್ಲಂಘನೆ ಪ್ರಕರಣಗಳನ್ನು ಪತ್ತೆ ಹಚ್ಚಿ ಪರಿಣಮಕಾರಿಯಾಗಿ ಕ್ರಮ ಕೈಗೊಳ್ಳುವ ಅಧಿಕಾರವನ್ನು ಈ ಮೆಟ್ರೋಪಾಲಿಟನ್ ಟಾಸ್ಕ್ ಫೋರ್ಸ್ ದಳಕ್ಕೆ ನೀಡಲಾಗಿರುತ್ತದೆ. ಈ ವಿಶೇಷ ದಳ ಅಸ್ಥಿತ್ವದಲ್ಲಿ ಇರುವ ಕಾರಣ ಮತ್ತು ಕಂದಾಯ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಕಾಯಿದೆ ಕಾನೂನಿನ ಅಡಿ ಕ್ರಮ ಕೈಗೊಳ್ಳಲು ಅಧಿಕಾರ ನೀಡಿರುವ ಹಿನ್ನೆಲೆಯಲ್ಲಿ ಕಂದಾಯ ಇಲಾಖೆಯ ಅಧೀನದಲ್ಲಿ ಟಾಸ್ಕ್ ಫೋರ್ಸ್ ರಚನೆಯ ಅಗತ್ಯತೆ ಇದೆಯೇ ಮತ್ತು ಈಗಾಗಲೇ ಅಸ್ಥಿತ್ವದಲ್ಲಿರುವ ಬೆಂಗಳೂರು ಮೆಟ್ರೋಪಾಲಿಟನ್ ಟಾಸ್ಕ್ ಫೋರ್ಸ್ ಯಾವ ರೀತಿ ಕಾರ್ಯ ನಿರ್ವಹಿಸುತ್ತಲಿದೆ ಎಂಬುದನ್ನು ತಿಳಿಯಲು ದಿನಾಂಕ 25-11-2004ರಂದು ಕಾರ್ಯದರ್ಶಿ ಕಂದಾಯ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಸಭೆಯಲ್ಲಿ ಚರ್ಚಿಸಲಾಯಿತು. ಸಾಕಷ್ಟು ಸಿಬ್ಬಂದಿ ಒದಗಿಸಿ ಕಂದಾಯ ಇಲಾಖೆಯ ವ್ಯಾಪ್ತಿಗೆ ಸೇರಿದ 1) ಕರ್ನಾಟಕ ಭೂ ಕಂದಾಯ ಕಾಯಿದೆ, 2)ಕರ್ನಾಟಕ ಭೂ ಸುಧಾರಣಾ ಕಾಯಿದೆ 3) ಇನಾಂ ಅಬಾಲಿಷನ್ ಕಾಯಿದೆ, 4) ಕರ್ನಾಟಕ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡ (ಕೆಲವು ಜಮೀನುಗಳ ಪರಭಾರೆ ನಿಷೇಧ ಕಾಯಿದೆಗಳ ಉಲ್ಲಂಘನೆ, ಬೋಗಸ್ ದಾಖಲೆಗಳನ್ನು ಸೃಷ್ಟಿಸಿದ ಪ್ರಕರಣಗಳನ್ನು ಪತ್ತೆ ಹಚ್ಚಿ ಸರ್ಕಾರಿ ಜಮೀನುಗಳ ಮೇಲಿನ ಅನಧಿಕೃತ ಒತ್ತುವರಿ ಖುಲ್ಲಾಪಡಿಸಲು ಅಧಿಕಾರ ನೀಡಿರುವ ಕಾರಣ ಕಂದಾಯ ಇಲಾಖೆಗೆ ವಿಶೇಷ ದಳ ರಚನೆಯ ಅಗತ್ಯತೆ ಇಲ್ಲವೆಂದು ಅಭಿಪ್ರಾಯಪಡಲಾಯಿತು. ಪ್ರಸ್ತುತ ಅಸ್ಥಿತ್ವದಲ್ಲಿನ ಈ ದಳಕ್ಕೆ ಕಂದಾಯ ಮತ್ತು ಭೂ ಮಂಜೂರಾತಿ ಸಿಬ್ಬಂದಿ ಬೆಂಬಲ ಇಲ್ಲದೇ ಇರುವ ಕಾರಣ ಮತ್ತು ಕಂದಾಯ ಇಲಾಖೆಯವರೊಂದಿಗೆ ಸಮನ್ವಯ ಇಲ್ಲದೇ ಇರುವ ಕಾರಣ ಗಣನೀಯವಾಗಿ ಹಾಗೂ ಪರಿಣಮಕಾರಿಯಾಗಿ ಕಾರ್ಯಾಚರಣೆ ಮಾಡಲು ಈ ದಳಕ್ಕೆ ಸಾಧ್ಯವಾಗದೇ ಇರುವು ದನ್ನು ಗಮನಿಸಿ ಪ್ರಸ್ತುತ ಅಸ್ಥಿತ್ವದಲ್ಲಿನ ಈ ದಳವನ್ನು ಮತ್ತಷ್ಟು ಪ್ರಬಲಗೊಳಿಸಿ ಪರಿಣಾಮಕಾರಿಯಾಗಿ ಕಾರ್ಯಚರಣೆ ಮಾಡಲು ಅನುವಾಗಲು ಹಾಗೂ ಬೆಂಗಳೂರು ನಗರ ಮತ್ತು ಸುತ್ತಮುತ್ತಲಿನ ಕಂದಾಯ ಇಲಾಖೆಯಲ್ಲಿನ ಆಸ್ತಿಗಳನ್ನು ಪರಿಣಾಮಕಾರಿಯಾಗಿ ಖುಲ್ಲಾಪಡಿಸಿ ಸಂರಕ್ಷಿಸುವ ಉದ್ದೇಶವನ್ನು ಇಟ್ಟುಕೊಂಡು ಈ ಕೆಳಕಂಡಂತೆ ಕ್ರಮ ಕೈಗೊಳ್ಳಲು ಪ್ರಸ್ತಾಪಿಸಲಾಯಿತು:

``i) ಜಿಲ್ಲಾಧಿಕಾರಿ ಬೆಂಗಳೂರು ನಗರ ಜಿಲ್ಲೆ ಕಾರ್ಯಲಯದಲ್ಲಿ ಉಪ ವಿಭಾಗಾಧಿಕಾರಿಗಳ ನೇತೃತ್ವದಲ್ಲಿ ಅನಧಿಕೃತ ಕಟ್ಟಡಗಳನ್ನು ಪ್ರತಿಬಂಧಿಸಲು ನಾಲ್ಕು ಸರ್ವೆಯರ್ ಮತ್ತು ನಾಲ್ಕು ಕಂದಾಯ ನಿರೀಕ್ಷಕರನ್ನು ಒಳಗೊಂಡ ಕೋಶ ಇದ್ದು ಈ ಕೋಶವು ಸುಮಾರು 20 ವರ್ಷಗಳ ಹಿಂದಿನಿಂದ ಯಾವು ದೇ ಕೆಲಸ ಮಾಡದೇ ಇರುವ ಕಾರಣ ಈ ನಾಲ್ಕು ಸರ್ವೆಯರ್ ಮತ್ತು ನಾಲ್ಕು ಕಂದಾಯ ನಿರೀಕ್ಷಕರ ಹುದ್ದೆಗಳ ಸಿಬ್ಬಂದಿಯನ್ನು ಬೆಂಗಳೂರು ಮೆಟ್ರೋಪಾಲಿಟನ್ ಟಾಸ್ಕ್ ಫೋರ್ಸ್‌ಗೆ ಜಿಲ್ಲಾಧಿಕಾರಿ ಬೆಂಗಳೂರು ನಗರ ಜಿಲ್ಲೆ ಬೆಂಗಳೂರು ಇವರು ವರ್ಗಾಯಿಸಲು,

ii) ಪ್ರಸ್ತುತ ಅಸ್ತಿತ್ವದಲ್ಲಿನ ದಳಕ್ಕೆ ಕಾನೂನು ಅಂಶಗಳ ಮೇಲೆ ಮಾರ್ಗದರ್ಶನ ಕೊರತೆ ಇರುವ ಕಾರಣ ಕಂದಾಯ ಇಲಾಖೆಯಲ್ಲಿ ಈಗಾಗಲೇ ಕಾನೂನು ಕೋಶವಿದ್ದು ಸದರಿ ಕಾನೂನು ಕೋಶಕ್ಕೆ ಸೀನಿಯರ್ ಸಿವಿಲ್ ಜಡ್ಜ್ ಹುದ್ದೆ ಹೊಂದಿದ ಮುಖ್ಯಸ್ಥರು ಇರುವರು. ಪರಿಣಾಮಕಾರಿಯಾಗಿ ಅನಧಿಕೃತ ಒತ್ತುವರಿ ಖುಲ್ಲಾಪಡಿಸಲು ಅನುವಾಗಲು ಕಾನೂನಿನ ನೆರವು ಮತ್ತು ಕಾನೂನಿನ ಸಲಹೆ ಮಾರ್ಗದರ್ಶನ ನೀಡಲು ಕಾನೂನು ಕೋಶಕ್ಕೆ ಹೊಣೆಗಾರಿಕೆ ನೀಡಲು,

iii) ಸರ್ಕಾರಿ ಜಮೀನಿನಲ್ಲಿ ಒತ್ತುವರಿ ಕಂಡು ಹಿಡಿದು ಖುಲ್ಲಾಪಡಿಸಲು ಮತ್ತು ಬೆಂಗಳೂರು ಮೆಟ್ರೋಪಾಲಿಟನ್ ಟಾಸ್ಕ್ ಫೋರ್ಸ್ ಇವರೊಂದಿಗೆ ಜಿಲ್ಲಾಧಿಕಾರಿ ಬೆಂಗಳೂರು ನಗರ ಜಿಲ್ಲೆ ಮತ್ತು ವಿಶೇಷ ಜಿಲ್ಲಾಧಿಕಾರಿ ಬೆಂಗಳೂರು ಇವರು ಸಮನ್ವಯತೆ ಹೊಂದಿಸಿದಲ್ಲಿ ಬೇರೆ ಯಾವ ಪ್ರತ್ಯೇಕ ದಳದ ಅವಶ್ಯಕತೆ ಇರುವು ದಿಲ್ಲ. ಆದ್ದರಿಂದ ಕಾಲೋಚಿತ ಪರಿಣಾಮಕಾರಿಯಾದ ಕ್ರಮ ಕೈಗೊಳ್ಳಲು ಅನುವಾಗಲು ರಾಜ್ಯ ಮಟ್ಟದಲ್ಲಿ ಚಾಲನೆ ಸಮಿತಿ ಮತ್ತು ಬೆಂಗಳೂರು ಜಿಲ್ಲಾ ಮಟ್ಟದಲ್ಲಿ ಸಮನ್ವಯ ಸಮಿತಿಗಳನ್ನು ರಚಿಸಲು

ಈ ಪ್ರಸ್ತಾವನೆಯಿಂದ ಸರ್ಕಾರಕ್ಕೆ ಯಾವು ದೇ ಹೆಚ್ಚುವರಿ ಅರ್ಥಿಕ ಹೊರೆಯಾಗುವುದಿಲ್ಲ ಎಂದು ಕಂಡು ಬಂದಿರುವುದರಿಂದ ಅರ್ಥಿಕ ಇಲಾಖೆಯ ಅಭಿಪ್ರಾಯ ಪಡೆದಿರುವು ದಿಲ್ಲ. ಆದರೆ, ಸದರಿ ಮೇಲ್ಕಂಡ ಪ್ರಸ್ತಾವನೆಗೆ ನಗರಾಭಿವೃದ್ಧಿ ಇಲಾಖೆಯ ಅಭಿಪ್ರಾಯ ಪಡೆಯಲಾಗಿದ್ದು, ಅವರ ಅಭಿಪ್ರಾಯ ಈ ಕೆಳಕಂಡಂತೆ ಇದೆ.

``Secretary R.D. The salary of the R.Is will continue to be paid out of same source as is being now. B.C.C. will not have to pay. The R.Is will be on deputation to the BMTF. The Cabinet note is agreed.``

ಹಿಂದಿನ ವಿಭಾಗಾಧಿಕಾರಿಗಳು ಸರ್ಕಾರಿ ಜಮೀನುಗಳ ಕಬಲಿಕೆಗೆ ಸಂಬಂಧಿಸಿದಂತೆ ವಿವರ ನೀಡಿದ್ದು, ಈ ಕೆಳಕಂಡಂತೆ ದೊಡ್ಡ ಪ್ರಮಾಣದಲ್ಲಿ ವಿವಿಧ ಪ್ರಕರಣಗಳು ಒಳಗೊಂಡಿದ್ದು ಕಂಡು ಬಂದಿದೆ.

| ಕ್ರಮ ಸಂಖ್ಯೆ | ಪ್ರಕರಣಗಳ ವಿವರ | ಒಟ್ಟು ಪ್ರಕರಣಗಳು | ಜಮೀನಿನ ವಿಸ್ತೀರ್ಣ (ಎಕರೆಗಳಲ್ಲಿ) | ಅಂದಾಜು ಮೌಲ್ಯ (ಲಕ್ಷರೂಗಳಲ್ಲಿ) |
|---|---|---|---|---|
| 1. | ಸರ್ಕಾರದ ಜಮೀನಿನಲ್ಲಿ ಅನಧಿಕೃತವಾಗಿ ಕಟ್ಟಡಗಳನ್ನು ಕಟ್ಟಿರುವು ದು | 24,042 | 1,774.35 | 2,784 |
| 2. | ಬೇನಾಮಿ : ಖೋಟಾ ದಾಖಲೆಯಿಂದ ಭೂ ಕಬಲಿಕೆ | 208 | 1,273 | 4,921 |
| 3. | ಭೂ ಪರಿವರ್ತನೆ ಇಲ್ಲದೆ ಸಾಗುವಳಿ ಜಮೀನನ್ನು ಇತರೆ ಉದ್ದೇಶಗಳಿಗಾಗಿ ಬಳಸಿಕೊಂಡಿರುವು ದು | 7,304 | 14,366 | - |

ಇನ್ನು ದೊಡ್ಡ ಪ್ರಮಾಣದಲ್ಲಿ ಆಗುತ್ತಿರುವ ಬೆಂಗಳೂರು ನಗರ ಮತ್ತು ಸುತ್ತಮುತ್ತಲಿನ ಕಂದಾಯ ಜಮೀನುಗಳ ಒತ್ತುವರಿಯಲ್ಲಿನ ಆಸ್ತಿಗಳನ್ನು ಪರಿಣಾಮಕಾರಿಯಾಗಿ ಖುಲ್ಲಾಪಡಿಸುವ ವಿಷಯದಲ್ಲಿ ರಾಜಕೀಯ ಸಂಕಲ್ಪದ ಅಗತ್ಯತೆ ಇರುವ ಕಾರಣ ಮೇಲ್ಕಂಡ ಪ್ರಸ್ತಾವನೆಯನ್ನು ದಿನಾಂಕ 17-2-2005ರಂದು ಸಚಿವ ಸಂಪುಟದ ಸಭೆಯಲ್ಲಿ ಮಂಡಿಸಿ ಅನುಮೋದನೆ ಪಡೆಯಲಾಯಿತು. ಆದುದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂ ಇ 30 ಎಲ್ ಜಿ ಬಿ 2001 ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2005**

ಈ ಮೇಲ್ಕಂಡ ಪ್ರಸ್ತಾವೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ನಗರಾಭಿವೃದ್ಧಿ ಇಲಾಖೆಯ ಅಧೀನದಲ್ಲಿನ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್ ಇವರ ನೇತೃತ್ವದಲ್ಲಿರುವ ಬೆಂಗಳೂರು ಮೆಟ್ರೋಪಾಲಿಟನ್ ಟಾಸ್ಕ್ ಫೋರ್ಸ್ ಇನ್ನು ಮುಂದೆ ಬೆಂಗಳೂರು ನಗರಪಾಲಿಕೆಗೆ ಸೇರಿದ ಆಸ್ತಿಗಳ ರಕ್ಷಣೆ, ಒತ್ತುವರಿ ಹಾಗೂ ಕಬಳಿಕೆಯನ್ನು ಖುಲ್ಲಾಪಡಿಸುವುದರ ಜೊತೆಗೆ ಈಗಾಗಲೇ ಮೇಲೆ ತಿಳಿಸಿದ ಕಂದಾಯ ಇಲಾಖೆಗೆ ಸಂಬಂಧಿಸಿದ ಕಾನೂನುಗಳಲ್ಲಿಯ ಅಧಿಕಾರವನ್ನು ಈ ವಿಶೇಷ ದಳಕ್ಕೆ ನೀಡಿರುವುದರಿಂದ ಅವುಗಳ ಅಡಿಯಲ್ಲಿ ಸರ್ಕಾರಿ ಜಮೀನುಗಳ, ಕೆರೆಗಳ, ಸ್ಥಿರಾಸ್ತಿಗಳ ರಕ್ಷಣೆ, ಹಾಗೂ ಕಬಳಿಕೆ ಮತ್ತು ಒತ್ತುವರಿ ಖುಲ್ಲಾಪಡಿಸುವ ಕಾರ್ಯವನ್ನು ಕಂದಾಯ ಇಲಾಖೆಯಲ್ಲಿ ಈ ಆದೇಶದಲ್ಲಿ ರಚಿಸಲಾದ ರಾಜ್ಯಮಟ್ಟದ ಚಲನಾ ಸಮಿತಿ ಹಾಗೂ ಬೆಂಗಳೂರು ಜಿಲ್ಲಾ ಮಟ್ಟದ ಸಮನ್ವಯ ಸಮಿತಿಯ ಮಾರ್ಗದರ್ಶನ, ಸಹಾಯ, ಸಮನ್ವಯ ಹಾಗೂ ಆದೇಶಗಳನ್ವಯ ಕಾರ್ಯ ನಿರ್ವಹಿಸಲು ನಿರ್ದೇಶಿಸಿದೆ.

ಕಂದಾಯ ಇಲಾಖೆಯು ಸಮನ್ವಯ ಹೊಂದಿ ಪರಿಣಾಮಕಾರಿಯಾಗಿ ಬೆಂಗಳೂರು ನಗರ ಮತ್ತು ಬೆಂಗಳೂರು ಸುತ್ತಮುತ್ತಲಿನ ಕಂದಾಯ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಜಮೀನಿನ ಅನಧಿಕೃತ ಒತ್ತುವರಿಯನ್ನು ಕಾನೂನುಬದ್ಧವಾಗಿ ಪರಿಣಾಮಕಾರಿಯಾಗಿ ಖುಲ್ಲಾಪಡಿಸಿ ಅವುಗಳನ್ನು ಸಂರಕ್ಷಿಸುವ ದೃಷ್ಟಿಯಿಂದ ಈ ಕೆಳಗಿನ ಕ್ರಮ ಕೈಗೊಳ್ಳಲಾಗಿದೆ.

``i) ಜಿಲ್ಲಾಧಿಕಾರಿ ಬೆಂಗಳೂರು ನಗರ ಜಿಲ್ಲೆ ಕಾರ್ಯಾಲಯದಲ್ಲಿ ಉಪ ವಿಭಾಗಾಧಿಕಾರಿಗಳ ನೇತೃತ್ವದಲ್ಲಿ ಅನಧಿಕೃತ ಕಟ್ಟಡಗಳನ್ನು ಪ್ರತಿಬಂಧಿಸಲು ನಾಲ್ಕು ಸರ್ವೆಯರ್ ಮತ್ತು ನಾಲ್ಕು ಕಂದಾಯ ನಿರೀಕ್ಷಕರನ್ನು ಒಳಗೊಂಡ ಕೋಶ ಇದ್ದು ಈ ಕೋಶವು ಸುಮಾರು 20 ವರ್ಷಗಳ ಹಿಂದಿನಿಂದ ಯಾವುದೇ ಕೆಲಸ ಮಾಡದೇ ಇರುವ ಕಾರಣ ಈ ನಾಲ್ಕು ಸರ್ವೆಯರ್ ಮತ್ತು ನಾಲ್ಕು ಕಂದಾಯ ನಿರೀಕ್ಷಕರ ಹುದ್ದೆಗಳ ಸಿಬ್ಬಂದಿಯನ್ನು ಬೆಂಗಳೂರು ಮೆಟ್ರೊಪಾಲಿಟನ್ ಟಾಸ್ಕ್ ಫೋರ್ಸ್‌ಗೆ ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರು ವರ್ಗಾಯಿಸುವರು.

ii) ಪ್ರಸ್ತುತ ಅಸ್ತಿತ್ವದಲ್ಲಿನ ದಳಕ್ಕೆ ಕಾನೂನು ಅಂಶಗಳ ಮೇಲೆ ಮಾರ್ಗದರ್ಶನ ಕೊರತೆ ಇರುವ ಕಾರಣ ಕಂದಾಯ ಇಲಾಖೆಯಲ್ಲಿ ಈಗಾಗಲೇ ಕಾನೂನು ಕೋಶವಿದ್ದು ಸದರಿ ಕಾನೂನು ಕೋಶಕ್ಕೆ ಸೀನಿಯರ್ ಸಿವಿಲ್ ಜಡ್ಜ್ ಹುದ್ದೆ ಹೊಂದಿದ ಮುಖ್ಯಸ್ಥರು ಇರುವರು. ಪರಿಣಾಮಕಾರಿಯಾಗಿ ಅನಧಿಕೃತ ಒತ್ತುವರಿ ಖುಲ್ಲಾಪಡಿಸಲು ಅನುವಾಗಲು ಕಾನೂನಿನ ನೆರವು ಮತ್ತು ಕಾನೂನಿನ ಸಲಹೆ ಮಾರ್ಗದರ್ಶನ ನೀಡಲು ಕಾನೂನು ಕೋಶಕ್ಕೆ ಹೊಣೆಗಾರಿಕೆ ನೀಡುವುದು.

iii) ಸರ್ಕಾರಿ ಜಮೀನಿನಲ್ಲಿ ಒತ್ತುವರಿ ಕಂಡು ಹಿಡಿದು ಖುಲ್ಲಾಪಡಿಸಲು ಮತ್ತು ಬೆಂಗಳೂರು ಮೆಟ್ರೊಪಾಲಿಟನ್ ಟಾಸ್ಕ್ ಫೋರ್ಸ್ ಇವರೊಂದಿಗೆ ಜಿಲ್ಲಾಧಿಕಾರಿ ಬೆಂಗಳೂರು ನಗರ ಜಿಲ್ಲೆ ಮತ್ತು ವಿಶೇಷ ಜಿಲ್ಲಾಧಿಕಾರಿ ಬೆಂಗಳೂರು ಇವರು ಸಮನ್ವಯತೆ ಹೊಂದಿಸಿದಲ್ಲಿ ಬೇರೆ ಯಾವ ಪ್ರತ್ಯೇಕ ದಳದ ಅವಶ್ಯಕತೆ ಇರುವುದಿಲ್ಲ. ಆದ್ದರಿಂದ ಕಾಲೋಚಿತ ಪರಿಣಾಮಕಾರಿಯಾದ ಕ್ರಮ ಕೈಗೊಳ್ಳಲು ಅನುವಾಗಲು ರಾಜ್ಯ ಮಟ್ಟದಲ್ಲಿ ಚಾಲನೆ ಸಮಿತಿ ಮತ್ತು ಬೆಂಗಳೂರು ಜಿಲ್ಲಾ ಮಟ್ಟದಲ್ಲಿ ಸಮನ್ವಯ ಸಮಿತಿಗಳನ್ನು ಈ ಕೆಳಕಂಡಂತೆ ರಚಿಸಲಾಗಿದೆ.

**A) ರಾಜ್ಯ ಮಟ್ಟದ ಚಾಲನೆ ಸಮಿತಿ (State Level Steering Committee)**

| | | |
|---|---|---|
| a) ಕಾರ್ಯದರ್ಶಿ ಕಂದಾಯ ಇಲಾಖೆ | - | ಅಧ್ಯಕ್ಷರು |
| b) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್ ಬಿ.ಎಂ.ಟಿ.ಎಫ್. | - | ಸದಸ್ಯರು |
| c) ಸೂಪರಿಂಟೆಂಡೆಂಟ್ ಆಫ್ ಪೊಲೀಸ್ ಬಿ.ಡಿ.ಎ ಟಾಸ್ಕ್ ಫೋರ್ಸ್ | - | ಸದಸ್ಯರು |
| d) ಡೆಪ್ಯೂಟಿ ಕಮೀಷನರ್ ಬೆಂಗಳೂರು(ನಗರ) | - | ಸದಸ್ಯರು |
| e) ಡೆಪ್ಯೂಟಿ ಕಮೀಷನರ್ ಬೆಂಗಳೂರು(ಗ್ರಾಮಾಂತರ) | - | ಸದಸ್ಯರು |
| f) ಡೆಪ್ಯೂಟಿ ಡೈರೆಕ್ಟರ್ ಲ್ಯಾಂಡ್ ರೆಕಾರ್ಡ್ಸ್ ಬೆಂಗಳೂರು | - | ಸದಸ್ಯರು |
| g) ಕಮೀಷನರ್ ಆಫ್ ಪೋಲೀಸ್ ಬೆಂಗಳೂರು ಇವರ ಪ್ರತಿನಿಧಿ | - | ಸದಸ್ಯರು |
| h) ಬೆಂಗಳೂರು ಮಹಾನಗರಪಾಲಿಕೆಯ ಪ್ರತಿನಿಧಿ | - | ಸದಸ್ಯರು |
| i) ಬೆಂಗಳೂರು ಅಭಿವೃದ್ಧಿ ಪ್ರಾಧೀಕಾರದ ಪ್ರತಿನಿಧಿ | - | ಸದಸ್ಯರು |
| j) ಉಪ ಕಾರ್ಯದರ್ಶಿ(ಭೂ ಮಂಜೂರಾತಿ) ಕಂದಾಯ ಇಲಾಖೆ | - | ಸದಸ್ಯ ಕಾರ್ಯದರ್ಶಿ |

**B) ಬೆಂಗಳೂರು ಜಿಲ್ಲಾ ಮಟ್ಟದಲ್ಲಿ ಸಮನ್ವಯ ಸಮಿತಿ**

| | | |
|---|---|---|
| a) ಡೆಪ್ಯೂಟಿ ಕಮೀಷನರ್ ಬೆಂಗಳೂರು (ನಗರ) | - | ಅಧ್ಯಕ್ಷರು |
| b) ಸ್ಪೆಶಲ್ ಡೆಪ್ಯೂಟಿ ಕಮೀಷನರ್ ಬೆಂಗಳೂರು | - | ಸದಸ್ಯ ಕಾರ್ಯದರ್ಶಿ |
| c) ಸೂಪರಿಂಟೆಂಡೆಂಟ್ ಆಫ್ ಪೋಲಿಸ್ ಬಿ.ಎಂ.ಟಿ.ಎಫ್ | - | ಸದಸ್ಯರು |
| d) ಕಾನೂನು ಕೋಶದ ಮುಖ್ಯಸ್ಥರು ಕಂದಾಯ ಇಲಾಖೆ | - | ಸದಸ್ಯರು |
| e) ಅಸಿಸ್ಟಂಟ್ ಡೈರೆಕ್ಟರ್ ಆಫ್ ಲ್ಯಾಂಡ್ ರೆಕಾರ್ಡ್ಸ್, ಬೆಂಗಳೂರು | - | ಸದಸ್ಯರು |
| f) ಕಮೀಷನರ್ ಆಫ್ ಪೋಲಿಸ್ ಬೆಂಗಳೂರು ಇವರ ಪ್ರತಿನಿಧಿ | - | ಸದಸ್ಯರು |

ಆದೇಶಿಸಲಾಗಿದೆ.

ಮೇಲ್ಕಂಡ ಆದೇಶ ನಗರಾಭಿವೃದ್ಧಿ ಇಲಾಖೆಯವರ ಅನಧಿಕೃತ ಟಿಪ್ಪಣಿ ಸಂಖ್ಯೆ: UD 144 ದಿನಾಂಕ 15-1-2005ದ ಅಡಿ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR-301

**ಎನ್.ಎ.ಮಾರ್ಗರೇಟ್**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಮಂಜೂರಾತಿ)